# ಅಧ್ಯಾತ್ಮಪ್ರಕಾಶ

ಸಂಸ್ಥಾಪಕರು : ಪ. ಪ. ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು

'एतज्ज्ञेयं नित्यमेवाऽऽत्मसंस्थं नातःपरं वेदितव्यं हि किंचित्'

ಸಂಪುಟ ೫೪ ಡಿಸೆಂಬರ್ ೧೯೮೪ ಸಂಚಿಕೆ ೪

## ವಿಷಯಗಳು



ಪತ್ರಿಕೆಯ ಚಂದಾ

**ವರ್ಷಕ್ಕೆ**

ರೂ. ೧೫-೦೦

**ಪೋಷಕರಿಗೆ ರೂ. ೨೦-೦೦**

**ಮಹಾಪೋಷಕರಿಗೆ ರೂ. ೧೫೧-೦೦**



**ಉಪಕಾರಸ್ಮರಣೆಯು ಅನಂತರದ ಪುಟವನ್ನು ನೋಡಿರಿ.**

ಪತ್ರಿಕೆಯ ಸಂಪಾದಕ ಮತ್ತು ಪ್ರಕಾಶಕ :
**ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,**
ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ-573211

December 1984

# ಕಾರ್ಯಾಲಯದ ಸುದ್ದಿ

**ಅನುಷ್ಠಾನಗಳು :** (೧) **ಗೀತಾಜಯಂತಿ**ಯ ಪ್ರಯುಕ್ತ 4-12-84ರಿಂದ ಮೂರು ದಿನಗಳ ಕಾಲ ವಿಶೇಷಪಾರಾಯಣ, ಪ್ರವಚನಾದಿಗಳು ನಡೆಯುವವು. 7-12-84 ರಂದು ಮಂಗಳವನ್ನಾಚರಿಸಲಾಗುವದು. (೨) **ಶ್ರೀಬ್ರಹ್ಮಚೈತನ್ಯರ ಆರಾಧನೆ** ಹಾಗೂ ಶ್ರೀ ಶ್ರೀ ಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳವರ **105 ನೆಯ ಜಯಂತಿ** ಪ್ರಯುಕ್ತ 14-12-84 ರಿಂದ ಮೂರು ದಿನಗಳ ಕಾಲ ವಿಶೇಷಾನುಷ್ಠಾನಗಳೂ ಪ್ರವಚನಗಳೂ ನಡೆಯುವವು. 17-12-84 ರಂದು ಮಂಗಳವಾಗುವದು. (೩) ತಾ॥ 20-12-84 ನೆಯ ಗುರುವಾರ **ಶ್ರೀಜ್ಞಾನಾನಂದೇಂದ್ರಸರಸ್ವತೀಮಹಾಸ್ವಾಮಿಗಳ** ಆರಾಧನೋತ್ಸವವು ವಿಶೇಷಕಾರ್ಯಕ್ರಮಗಳೊಡನೆ ನಡೆಯುತ್ತದೆ. ಈ ಎಲ್ಲಾ ಅನುಷ್ಠಾನಗಳಿಗೂ ಸರ್ವರಿಗೂ ಸುಸ್ವಾಗತವನ್ನು ಬಯಸುತ್ತೇವೆ.

**ಪಾಠಪ್ರವಚನಗಳು :** ವಿದ್ಯಾರ್ಥಿ ಶ್ರೀ॥ ಕೃಷ್ಣಮೂರ್ತಿಗಳವರಿಗೂ ಉಳಿದ ಜಿಜ್ಞಾಸುಗಳಿಗೂ ಗೀತಾಭಾಷ್ಯ, ತೈತ್ತಿರೀಯೋಪನಿಷದ್ಭಾಷ್ಯ- ಪಾಠಗಳು ಕ್ರಮವಾಗಿ ನಡೆಯುತ್ತಿವೆ. ಈಗ ಗೀತಾಭಾಷ್ಯದಲ್ಲಿ ೯ನೆಯ ಅಧ್ಯಾಯವೂ ಶೀಕ್ಷಾವಲ್ಲಿಭಾಷ್ಯಭಾಗವೂ ಮುಂದುವರೆದಿವೆ.

**ಆಡಳಿತವಿಭಾಗ :** (೧) 1983 ವರ್ಷದ ಲೆಕ್ಕಗಳೆಲ್ಲವೂ ಆಡಿಟ್ ಆಗಿದ್ದು ಬ್ಯಾಲೆನ್ಸ್‌ಷೀಟು ಅಂಗೀಕೃತವಾಗಿದೆ. ಆಡಿಟರ್‌ರವರು ಸಂಸ್ಥೆಯ ಲೆಕ್ಕಪತ್ರಗಳು, ಪುರೋಭಿವೃದ್ಧಿ, ಮಹಾಜನರ ಪ್ರೋತ್ಸಾಹ- ಮುಂತಾದವುಗಳ ವಿಷಯಕ್ಕೆ ಪೂರ್ಣತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ. ಸಂಸ್ಥೆಯ ಮೂಲನಿಧಿಯು ಬೆಳವಣಿಗೆ ಏರುತ್ತಿದ್ದು ಅದರ ಆರ್ಥಿಕಸ್ಥಿತಿಯು ಸುಭದ್ರವಾಗಿದೆ- ಎಂದು ಆಡಿಟ್‌ರಿಪೋರ್ಟಿನಲ್ಲಿ ತಿಳಿಸಿದ್ದಾರೆ. (೨) 1963 ರಿಂದ 21 ವರ್ಷಗಳ ಕಾಲ ಅನವರತವಾಗಿ ಅಕೌಂಟೆಂಟರಾಗಿ ಸೇವೆಯನ್ನು ಸಲ್ಲಿಸುತ್ತಿದ್ದ **ಶ್ರೀ ಡಿ.** ವೆಂಕಟೇಶಯ್ಯನವರು ತಮ್ಮ ವಯೋಧರ್ಮದ ನಿಮಿತ್ತ 1-12-84 ರಿಂದ ನಿವೃತ್ತರಾಗಿದ್ದಾರೆ. ಈ ಮಹನೀಯರಿಗೆ ಸಂಸ್ಥೆಯ ಪರವಾಗಿ ಕೃತಜ್ಞತೆಗಳನ್ನು ಅರ್ಪಿಸುವೆವು. (೩) ಕಾರ್ಯದರ್ಶಿಗಳಿಗೆ ಸಹಾಯಕರಾಗಿ ಕೆಲಸವನ್ನು ಮಾಡಲು 1-10-84 ರಿಂದ ವಿದ್ಯಾರ್ಥಿ ಶ್ರೀ ಕೃಷ್ಣಮೂರ್ತಿಯವರನ್ನು ಅಧೀನಕಾರ್ಯದರ್ಶಿಯನ್ನಾಗಿ ನೇಮಿಸಲಾಗಿದೆ. ಶ್ರೀ ಸುಬ್ಬಾರಾಯ-ಎಂಬವರನ್ನು ಸಹಾಯಕಗುಮಾಸ್ತರಾಗಿ ನೇಮಿಸಲಾಗಿದೆ.

**ಗ್ರಂಥಪ್ರಕಟನೆ :** ಬೃಹದಾರಣ್ಯಕ-೧ ನೆಯ ಭಾಗವು ಬೈಂಡಾಗುತ್ತಿದೆ. ೨ನೆಯ ಭಾಗವು ಇನ್ನು ಕೇವಲ ೨೦೦ ಪುಟಗಳಷ್ಟು ಮಾತ್ರ ಪ್ರಿಂಟಾಗಬೇಕು. ಮುದ್ರಣಕೆಲಸವು ಮುಂದುವರೆದಿದೆ. ಹೆಚ್ಚಿನ ವಿವರಗಳಿಗೆ 'ಉಪಕಾರಸ್ಮರಣೆ'ಯ ಅನಂತರದ ಪುಟವನ್ನು ನೋಡಿರಿ.

**ಸಂಪಾದಕರು :** ಡಿಸೆಂಬರ್ ಮಾಹೆ ಪೂರ ಪ್ರವಾಸಕಾರ್ಯಕ್ರಮವಿಲ್ಲ. 4-1-85 ರಿಂದ ಶಿವಮೊಗ್ಗದಲ್ಲಿ ಉಪನ್ಯಾಸಗಳನ್ನು ನೀಡಲಿದ್ದಾರೆ.

———




ಸಂಪುಟ ೫೪]   ವರ್ಷಕ್ಕೆ ರೂ. ೧೫-೦೦ ;  ಬಿಡಿ ಸಂಚಿಕೆಗೆ : ರೂ. ೧.೩೫   [ಸಂಚಿಕೆ ೪

ಡಿಸೆಂಬರ್-1984

( ಶ್ರೀ ರಕ್ತಾಕ್ಷಿಸಂವತ್ಸರದ ಮಾರ್ಗಶಿರ )

## ತ್ರಿವೃತ್ಕರಣ

**ಓಂ ॥ ತಾಸಾಂ ತ್ರಿವೃತಂ ತ್ರಿವೃತಮೇಕೈಕಾಂ ಕರವಾಣೀತಿ ಸೇಯಂ ದೇವತೇಮಾಸ್ತಿಸ್ರೋ ದೇವತಾ ಅನೇನೈವ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರೋತ್ ॥**

—ಛಾಂದೋಗ್ಯೋಪನಿಷತ್ತು ೬-೩-೩.

**ಭಾವಾರ್ಥ:**- ಅವುಗಳಲ್ಲಿ ಒಂದೊಂದನ್ನೂ ತ್ರಿವೃತ-ತ್ರಿವೃತವಾಗಿ ಮಾಡುವೆನು-ಎಂದು ( ಯೋಚಿಸಿನೋಡಿತು ). ಆ ಈ ದೇವತೆಯು ಈ ಮೂರು ದೇವತೆಗಳನ್ನು ಇದೇ ಜೀವಾತ್ಮನ ರೂಪದಿಂದ ಅನುಪ್ರವೇಶಮಾಡಿ ನಾಮರೂಪಗಳನ್ನು ವ್ಯಾಕರಣಮಾಡಿತು.

[ಪರಬ್ರಹ್ಮವು ಜೀವಾತ್ಮರೂಪದಿಂದ ಮಹಾಭೂತಗಳನ್ನು ಒಳಹೊಕ್ಕು ಒಂದೊಂದನ್ನೂ ಮೂರು ಮೂರರ ಬೆರಕೆಯಾಗಿ ಮಾಡಿ ವ್ಯವಹಾರಯೋಗ್ಯವಾಗುವಂತೆ ಉಂಟುಮಾಡಿತು. ಆದ್ದರಿಂದ ಮೂಲರೂಪದಿಂದ ವಿಚಾರಮಾಡಿದಾಗ ಎಲ್ಲವೂ ಪರಬ್ರಹ್ಮದಲ್ಲಿಯೇ ಒಂದಾಗಿ ಅದೊಂದೇ ಪರಮಾರ್ಥಸತ್ಯವೆಂದು ತಿಳಿದುಬರಲಿದೆ-ಎಂದಭಿಪ್ರಾಯ.]

---

# ಅಧ್ಯಾತ್ಮಸಂದೇಶ

(ಗುರುಕಿಂಕರ)

## ತ್ರಿವೃತ್ಕರಣ-ಪಂಚೀಕರಣಗಳು

ಉದ್ದಾಲಕನು ಶ್ವೇತಕೇತುವಿಗೆ ಸದ್ಬ್ರಹ್ಮವೇ ಜಗತ್ತೆಲ್ಲವೂ ಆಗಿದೆ–ಎಂಬ ತತ್ತ್ವವನ್ನು ಬೇರೆಬೇರೆಯ ರೀತಿಗಳಿಂದ ತಿಳಿಸಲಾರಂಭಿಸಿದ್ದಾನೆ. ಅದಕ್ಕಾಗಿ ಸೃಷ್ಟಿಪ್ರಕ್ರಿಯೆಯನ್ನು ದ್ವಾರವಾಗಿ ಮಾಡಿಕೊಳ್ಳಲಾಗಿದೆ. ಈ ಮಹಾಸೃಷ್ಟಿಯು ಹೊರತೋರಿಕೊಂಡು ಎಷ್ಟೋ ಕಾಲವು ಕಳೆದಿದೆ. ಆ ಕಾಲಾವಧಿಯಲ್ಲಿ ಎಷ್ಟೋ ಜನರು ಋಷಿಗಳೂ ವಿಜ್ಞಾನಿಗಳೂ ಸೃಷ್ಟಿರಹಸ್ಯವನ್ನು ಬಯಲುಮಾಡಲು ಪ್ರಯತ್ನಪಟ್ಟಿರುತ್ತಾರಾದರೂ ಜಗತ್ತಿನ ವಿಷಯಕ್ಕೆ ಹೇಳುವದಾದರೆ ಮಾನವನಿಗೆ ತಿಳಿದಿರುವದಕ್ಕಿಂತ ತಿಳಿಯದೆ ಇರುವದೇ ಅಧಿಕವಾಗಿದೆ-ಎಂಬಿದು ನಿತ್ಯಸತ್ಯವಾಗಿದೆ. ಹೀಗಿದ್ದರೂ ಉಪನಿಷತ್ತುಗಳು ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಪ್ರತಿಜ್ಞೆ ಮಾಡಿ ಒಂದಾನೊಂದು ಅಸಾಧಾರಣರೀತಿಯಿಂದ ಸೃಷ್ಟಿರಹಸ್ಯವನ್ನು ಭೇದಿಸಿ ಬೆಳಕನ್ನು ನೀಡಿವೆ. ಇವುಗಳ ಅನ್ವೇಷಣಾಕ್ರಮವು ಒಳಗಿನಿಂದ ಹೊರಕ್ಕೆ ಹೋಗುವ ಹಾದಿಯನ್ನು ಬಿಟ್ಟು ಹೊರಗಿನಿಂದ ಒಳಕ್ಕೆ ಹೋಗುವ ಪ್ರಯತ್ನದಲ್ಲಿಯೇ ಕೇಂದ್ರೀಕೃತವಾಗಿದೆ. ಆದ್ದರಿಂದ ಪ್ರತಿಜ್ಞಾಸಾಧನೆಯು ಕೈಗೂಡುವಂತಾಗಿದೆ. ಒಮ್ಮೆ ಇಂಥ ಮಹಾತತ್ತ್ವದ ಅರಿವಾಗಿಬಿಟ್ಟಿತೆಂದರೆ ಮುಂದೆ ಎಂದೆಂದಿಗೂ ಅರಿಯಲ್ಪಡಬೇಕಾದದ್ದು ಏನೂ ಉಳಿಯದಂತಾಗಿ ಜಿಜ್ಞಾಸೆಯು ಪರಿಸಮಾಪ್ತಿಯಾಗಿಬಿಡುತ್ತದೆ. ಆದ್ದರಿಂದ ಉಪನಿಷತ್ತಿನ ವಿಚಾರಕ್ರಮವನ್ನು ಪರಿಶೀಲನೆಮಾಡಿದಷ್ಟೂ ನಾವು ನಿಜವನ್ನೇ ಸಮೀಪಿಸುತ್ತೇವೆಂಬುದು ಖಂಡಿತವಾದ ವಿಷಯವಾಗಿದೆ. ಪ್ರಕೃತದಲ್ಲಿ ತ್ರಿವೃತ್ಕರಣವಿಚಾರವನ್ನು ಶ್ರುತಿಯಲ್ಲಿ ಹೇಳಿರುವಂತೆ ಮನನಮಾಡೋಣ.

ಈಗ ಮತ್ತೊಂದು ವಿಚಾರವನ್ನೂ ಪ್ರಸ್ತಾಪಿಸಬೇಕಾಗಿದೆ. ಅನೇಕ ವೇದಾಂತ ಗ್ರಂಥಗಳಲ್ಲಿ 'ಪಂಚೀಕರಣ'ವೆಂಬ ವಿಚಾರಸರಣಿಯಿರುತ್ತದೆ. ಸ್ವಲ್ಪಮಟ್ಟಿಗೆ ವೇದಾಂತತತ್ತ್ವಶ್ರವಣಮಾಡಿದವರಿಗೂ ಈ ಶಬ್ದವು ಕಿವಿಗೆ ಬಿದ್ದಿರುತ್ತದೆ. ಆದರೆ ಶ್ರುತಿಗಳಲ್ಲಿ ಪಂಚೀಕರಣವಿಚಾರವಿರುವದಿಲ್ಲ. ತ್ರಿವೃತ್ಕರಣವು ಕಂಠೋಕ್ತವಾಗಿ ಹೇಳಲ್ಪಟ್ಟಿದೆ. ಈ ವಿಷಯದಲ್ಲಿ ಶ್ರೀಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ತಿಳಿಸಿರುವದೇನೆಂದರೆ : "ಹೇಗೆ ತ್ರಿವೃತ್ಕೃತವಾದ ಭೂತಗಳಲ್ಲಿ ಮೂರುರೂಪಗಳೇ ಸತ್ಯವೆಂಬುದು ತತ್ತ್ವವೋ ಹಾಗೆಯೇ ಪಂಚೀಕರಣದ ವಿಷಯದಲ್ಲಿಯೂ ತಿಳಿದುಕೊಳ್ಳಬೇಕು. ಏಕೆಂದರೆ ನ್ಯಾಯವು ಸಮಾನವಾಗಿದೆ" ಎಂದಿರುತ್ತಾರೆ. ಇದರಿಂದ ಆಚಾರ್ಯರಿಗೆ ಪಂಚೀಕರಣಪ್ರಕ್ರಿಯೆಯೂ ಒಪ್ಪಾಗಿರುತ್ತದೆ- ಎಂದು ಕಂಡುಬರುತ್ತದೆ. ಆದರೆ ಶ್ರುತಿಯಲ್ಲಾಗಲಿ, ಭಾಷ್ಯದಲ್ಲಾಗಲಿ ಈ ಪ್ರಕ್ರಿಯೆಗಳನ್ನು ಸತ್ತೊಂದೇ ಏಕಮೇವಾದ್ವಿತೀಯವೆಂದು ತಿಳಿಸಲು ಉಪಾಯವಾಗಿ ಹೇಳಿರುತ್ತದೆಯೇ

ಹೊರತು ತಾತ್ಪರ್ಯದಿಂದ ಹೇಳಿಲ್ಲವೆಂದು ನೆನಪಿಡಬೇಕು. ಹಾಗೆಂದೇ ಆಚಾರ್ಯರು ಸೂಚಿಸಿರುತ್ತಾರೆ.

ಈಗ ಶ್ರುತಿಯು ಸ್ವೀಕರಿಸಿರುವ ತ್ರಿವೃತ್ಕರಣಪ್ರಕ್ರಿಯೆಯಲ್ಲಿ ಉದಾಹರಿಸಿರುವ ಆದಿತ್ಯ, ಚಂದ್ರ, ವಿದ್ಯುತ್ತುಗಳೆಂಬ ತೇಜೋರೂಪವಾದ ದ್ರವ್ಯಗಳ ತ್ರಿವೃತ್ಕರಣವನ್ನು ತಿಳಿಯೋಣ. ತೇಜಸ್ಸೆಂದರೆ ಬೆಳಕು. ಇದನ್ನು ವಿಭಜನೆಮಾಡಿದಾಗ ಕೆಂಪು, ಬಿಳುಪು, ಕಪ್ಪು-ಎಂಬ ಮೂರು ಬಣ್ಣಗಳು ಕಂಡುಬರುವವು. ಆದಿತ್ಯನಾಗಲಿ, ಇತರ ಬೆಳಕಾಗಲಿ-ತೇಜಸ್ಸೇ ಆಗಿರುವದರಿಂದ ಈ ತೇಜೋದ್ರವ್ಯವು ತ್ರಿವೃತ್ಕೃತವಾದ ಮೇಲೆಯೇ ಆದಿತ್ಯನೆಂದು ಕರೆಯಲ್ಪಟ್ಟಿದೆ-ಎಂದು ಶ್ರುತಿಯ ಅಭಿಪ್ರಾಯ. ಈಗ ಆದಿತ್ಯನೆಂದರೇನು ? ಎಂದು ವಿಚಾರಮಾಡಿದರೆ ಮೂರು ಬಣ್ಣಗಳನ್ನು ಬಿಟ್ಟರೆ ಸ್ವತಂತ್ರವಾಗಿ ಆದಿತ್ಯನೆಂಬ ತತ್ತ್ವವಿಲ್ಲ-ಎಂದೇ ಸಿದ್ಧವಾಗುತ್ತದೆ. ಏಕೆಂದರೆ ಅವನಲ್ಲಿರುವ ಮೂರು ಬಣ್ಣಗಳೂ ಕ್ರಮವಾಗಿ ತೇಜಸ್ಸು, ಅಪ್ಪು, ಪೃಥಿವೀ- ಎಂಬ ಮಹಾಭೂತಗಳಿಗೆ ಸೇರಿದ್ದಾಗಿವೆ. ಆದಿತ್ಯನದಾಗಿ ಉಳಿದದ್ದು ಏನೂ ಇರುವದಿಲ್ಲ. ಆಗ ಆದಿತ್ಯನ ಆದಿತ್ಯತ್ವವು ಹೋಯಿತು. ಮೂರು ರೂಪಗಳೆಂಬುದೇ ನಿಜವಾಯಿತು- ಎಂದರ್ಥ. ಇದೇ ತ್ರಿವೃತ್ಕರಣದ ಪ್ರಯೋಜನವಾಗಿದೆ. ಆದರೆ ಹೀಗೆ ಬೆಳಕನ್ನು ವಿಭಜನೆಮಾಡಿದಾಗ ಉಳಿಯುವ ರೂಪತ್ರಯಗಳೆಂಬಿವು ಕೇವಲ ಜಡವಸ್ತುಗಳಲ್ಲ. ಮತ್ತೇನೆಂದರೆ ಹಾಗೆ ಬ್ರಹ್ಮನೇ ತೋರಿಕೊಂಡಿದೆ- ಎಂದು ಅಭಿಪ್ರಾಯ. ರೂಪತ್ರಯವಾಗಿ ತೋರಿಕೊಂಡ ಬ್ರಹ್ಮವನ್ನು ಅರಿಯಲಾರದವರು ತಮ್ಮ ಬುದ್ಧಿಯಲ್ಲಿ ಆದಿತ್ಯ, ಚಂದ್ರ, ವಿದ್ಯುತ್ತುಗಳೆಂಬ ನಾಮರೂಪಗಳನ್ನು ಕಲ್ಪಿಸಿ ವ್ಯವಹರಿಸಿದ್ದಾರೆ. ಇಷ್ಟೇ ಹೊರತು ಸದ್ಬ್ರಹ್ಮಕ್ಕಿಂತ ಬೇರೆಯಾಗಿ ರೂಪತ್ರಯಗಳಾಗಲಿ ಆದಿತ್ಯಾದಿಗಳಾಗಲಿ ಇಲ್ಲ- ಎಂದೇ ತಾತ್ಪರ್ಯವು. ಏಕೆಂದರೆ ತೋರಿಕೆಯ ವಸ್ತುಗಳಿಗೆ ಸ್ವತಂತ್ರವಾದ ಅಸ್ತಿತ್ವವಿರುವದಿಲ್ಲ. ಹೀಗೆ ತ್ರಿವೃತ್ಕರಣವನ್ನು ಶ್ರುತಿಯು ಮೂಲವಸ್ತುವಿನ ವಿಜ್ಞಾನಕ್ಕಾಗಿ ಆಶ್ರಯಿಸಿ ವಿಚಾರಮಾಡಿ ಕಡೆಯಲ್ಲಿ ಆ ಮೂಲಭೂತವಸ್ತುವೆಂಬುದು ಸತ್ತೇ, ಅದೇ ಬ್ರಹ್ಮವು ಎಂದು ಉಪಸಂಹಾರಮಾಡಿರುತ್ತದೆ.

ಈಗ ತ್ರಿವೃತ್ಕರಣ-ಪಂಚೀಕರಣಗಳ ವಿವರವನ್ನು ತಿಳಿಯೋಣ. ಈ ಉಪನಿಷತ್ತಿನಲ್ಲಿ ಬ್ರಹ್ಮವು ಮೊದಲು ತೇಜಸ್ಸನ್ನು ಸೃಷ್ಟಿಸಿತು-ಎಂದು ತಿಳಿಸಿದೆ. ಆದರೆ ತೈತ್ತಿರೀಯೋಪನಿಷತ್ತಿನಲ್ಲಿ ಸೃಷ್ಟಿಕ್ರಮವನ್ನು ಹೇಳುವಾಗ ಆತ್ಮ(ಬ್ರಹ್ಮ)ನಿಂದ ಆಕಾಶವು ಮೊದಲು ಸೃಷ್ಟಿಯಾಯಿತು-ಎಂದು ಹೇಳಿದೆ. ಹೀಗೆ ಸೃಷ್ಟಿಪ್ರಕ್ರಿಯೆಯ ವಿವರಣೆಯಲ್ಲಿ ಉಪನಿಷತ್ತುಗಳಿಗೆ ಪರಸ್ಪರ ವಿಗಾನ (ಭಿನ್ನಾಭಿಪ್ರಾಯ) ವಿದೆ. ಆದರೆ ಬ್ರಹ್ಮದಿಂದಲೇ ಸೃಷ್ಟಿಯಾಯಿತು- ಎಂಬ ವಿಚಾರಕ್ಕೆ ಮಾತ್ರ ವಿಗಾನವಿಲ್ಲ. ಏಕಾಭಿಪ್ರಾಯವೇ ಇದೆ. ಈ ಕಾರಣದಿಂದಲೂ ಶ್ರುತಿಗಳಿಗೆ ಸೃಷ್ಟಿಯನ್ನು ತಿಳಿಸುವದರಲ್ಲಿ ಪರಮತಾತ್ಪರ್ಯವಿಲ್ಲ- ಎಂದಾಗುತ್ತದೆ. ಇದು ಹಾಗಿರಲಿ ; ಭಾಷ್ಯಕಾರರು ಈ ಸೃಷ್ಟಿವಾಕ್ಯಗಳಿಗೆ ವಿರೋಧವನ್ನು ಪರಿಹಾರಮಾಡುವದಕ್ಕಾಗಿ ಛಾಂದೋಗ್ಯ

ದಲ್ಲಿರುವ 'ತೇಜಸ್ಸನ್ನು ಸೃಷ್ಟಿಸಿತು' ಎಂಬ ವಾಕ್ಯಕ್ಕೆ ತೈತ್ತಿರೀಯಕಕ್ಕೂ ಅನುಗುಣವಾಗುವಂತೆ ಆಕಾಶ- ವಾಯುಗಳನ್ನು ಸೃಷ್ಟಿಸಿದ ಅನಂತರ ತೇಜಸ್ಸನ್ನುಂಟುಮಾಡಿತು, ಎಂದು ಅರ್ಥಮಾಡಬೇಕು- ಎಂದು ತಿಳಿಸಿದ್ದಾರೆ. ಇದರಿಂದ ಪಂಚೀಕರಣಪ್ರಕ್ರಿಯೆಗೆ ಅವಕಾಶವು ದೊರೆತಂತಾಗಿದೆ. ಹೀಗೆ ಐದು ಮಹಾಭೂತತನ್ಮಾತ್ರೆಗಳನ್ನು ಉಂಟುಮಾಡಿರುವ ಬ್ರಹ್ಮವು ಅವುಗಳನ್ನು ಪಂಚೀಕರಣಮಾಡಿತು ಅಥವಾ ತ್ರಿವೃತ್ಕರಣಮಾಡಿತು-ಎಂಬಿದು ಇಲ್ಲಿ ತಿಳಿಯಬೇಕಾದ ವಿಷಯವಾಗಿದೆ. ಪಂಚೀಕರಣಕ್ಕೆ ಉದಾಹರಣೆಯಾಗಿ ಮನುಷ್ಯದೇಹವನ್ನೇ ತೆಗೆದುಕೊಳ್ಳೋಣ. ಇದರಲ್ಲಿ ಮಾಂಸ, ಚರ್ಮ, ಎಲುಬು- ಮುಂತಾದ ಪೃಥಿವಿಯ ಗಟ್ಟಿಯಾದ ಅಂಶಗಳಿವೆ. ಇವೇ ಪ್ರಧಾನವಾಗಿರುವದರಿಂದ ಮನುಷ್ಯದೇಹವನ್ನು ಪಾರ್ಥಿವದೇಹವೆಂದೇ ಕರೆಯುತ್ತಾರೆ. ಆದರೆ ಈ ಪಾರ್ಥಿವಾಂಶವು ಸೇಕಡ ಐವತ್ತು ಭಾಗ ಮಾತ್ರವಿದೆ. ಇನ್ನುಳಿದ ಐವತ್ತು ಭಾಗದಲ್ಲಿ ಹನ್ನೆರಡೂವರೆಯಂತೆ ಅಪ್ಪು, ತೇಜಸ್ಸು, ವಾಯು, ಆಕಾಶಗಳು ಮನುಷ್ಯದೇಹದಲ್ಲಿವೆ. ಅಲ್ಲಿಗೆ ಐದು ಭೂತಗಳೂ ಸೇರಿ ಪಂಚೀಕೃತವಾಗಿ ಪಾಂಚಭೌತಿಕದೇಹವೆಂದು ಮನುಷ್ಯಶರೀರವು ಪ್ರಸಿದ್ಧವಾಯಿತು. ಇದು ಅನುಭವಕ್ಕೂ ಅನುಗುಣವಾಗಿದೆ. ತಿಂದ ಆಹಾರ, ನೀರುಗಳು ಹೊಟ್ಟೆಯಲ್ಲಿ ಸೇರುವದರಿಂದಲೂ ಕಿವಿ, ಮೂಗಿನ ಹೊಳ್ಳೆಗಳು, ಗಂಟಲು, ಬಾಯಿಗಳಲ್ಲಿ ಖಾಲಿಸ್ಥಳವಿರುವದರಿಂದಲೂ ಆಕಾಶವಿದೆ- ಎಂದಾಯಿತು. ಉಸಿರಾಡುತ್ತಲೇ ಇರುವದರಿಂದ ವಾಯುವೂ ತಿಂದ ಅನ್ನವು ಜೀರ್ಣವಾಗುವದು, ಮೈ ಶಾಖವಾಗಿರುವದು-ಇವುಗಳಿಂದ ತೇಜಸ್ಸು ಇದೆಯೆಂದೂ, ರಕ್ತಸಂಚಾರಾದಿಗಳಿಂದ ನೀರಿನ ಅಂಶವೂ ಇದೆಯೆಂದೂ ಸುಲಭವಾಗಿ ತಿಳಿಯಬಹುದು. ಇದೇ ರೀತಿಯಾಗಿ ಭೂಮಿಯಲ್ಲಿ ಸೃಷ್ಟವಾಗಿರುವ ಶರೀರಗಳೆಲ್ಲ ಪಂಚೀಕೃತವಾಗಿವೆ. ಆದ್ದರಿಂದಲೇ ಈ ಶರೀರಾದಿಗಳಿಗೆ ಮೂಲವಸ್ತುಗಳಾದ ಪೃಥಿವ್ಯಾದಿಗಳೂ ಮೇಲಿನ ಕ್ರಮದಂತೆಯೇ ಪಂಚೀಕೃತವಾಗಿವೆ. ಹಾಗಿಲ್ಲವಾದರೆ ಅವು ವ್ಯವಹಾರಯೋಗ್ಯವಾಗಲಾರವು. ಹೀಗೆ ಪಂಚೀಕರಣವನ್ನು ತಿಳಿದುಕೊಂಡಮೇಲೆ ತ್ರಿವೃತ್ಕರಣದ ಬಗ್ಗೆ ಯಾವ ಸಂಶಯವೂ ಇರುವದಿಲ್ಲ. ಏಕೆಂದರೆ ಪಂಚೀಕರಣದಲ್ಲಿ ತ್ರಿವೃತ್ಕರಣವು ಅಡಕವಾಗಿಯೇಬಿಟ್ಟಿದೆ. ಈ ಛಾಂದೋಗ್ಯಶ್ರುತಿಯಲ್ಲಿ ತ್ರಿವೃತ್ಕರಣವನ್ನು ಸ್ವೀಕರಿಸಿದೆ. ಶ್ರೀಶಂಕರಾಚಾರ್ಯರ ಅಭಿಪ್ರಾಯದಂತೆ ಇವೆರಡರಲ್ಲಿ ಯಾವ ಪ್ರಕ್ರಿಯೆಯಾದರೂ ಸರಿ, ಮೂಲವಸ್ತುವಿನ ಪರ್ಯಂತವಾಗಿ ನಮ್ಮ ವಿಚಾರಸರಣಿಯನ್ನೂ ಬುದ್ಧಿಯನ್ನೂ ಕೊಂಡೊಯ್ಯಲು ಸಹಾಯಕವಾಗಿದ್ದರೆ ಸಾಕು- ಈ ಪ್ರಕ್ರಿಯೆಗಳ ಪ್ರಯೋಜನವಿಷ್ಟೇ- ಎಂದು ನಿರ್ಣಯಿಸಿರುತ್ತಾರೆ. ತ್ರಿವೃತ್ಕರಣವು ಪಂಚೀಕರಣಕ್ಕಿಂತ ಸ್ಥೂಲವಾದ್ದರಿಂದ ಸಾಮಾನ್ಯರಿಗೆ ಬೇಗನೆ ತತ್ತ್ವಗ್ರಹಣಕ್ಕೆ ಅನುಕೂಲವಾದೀತೆಂದು ಭಾವಿಸಿ ಇಲ್ಲಿ ತ್ರಿವೃತ್ಕರಣವನ್ನೇ ಹೆಚ್ಚಾಗಿ ವಿಚಾರಮಾಡಿದೆ.

ಈಗ ತ್ರಿವೃತ್ಕರಣವನ್ನು ಆಧ್ಯಾತ್ಮಿಕವಾಗಿ ಶ್ರುತಿಯು ವಿವರಿಸಿರುವದನ್ನು ತಿಳಿಯೋಣ. ಮನುಷ್ಯನ ಶರೀರದೊಳಗೆ ಮನಸ್ಸು, ಪ್ರಾಣ, ವಾಕ್ಕುಗಳಿರುವದು

ಎಲ್ಲರಿಗೂ ತಿಳಿದಿದೆ. ಇವು ಕ್ರಮವಾಗಿ ಅನ್ನ, ನೀರು, ಬೆಳಕು (ತೇಜಸ್ಸು)ಗಳಿಂದ ಆಗಿವೆ ಎಂದು ತಿಳಿಸಿದ್ದಾರೆ. ಇವುಗಳ ಪ್ರತಿಪಾದನೆಯು ಹೇಗೆಂದರೆ (೧) ಊಟ ಮಾಡಿದ ಅನ್ನವು ಮೂರುವಿಭಾಗಗಳಾಗಿ ಗಟ್ಟಿಯಾದ ನೀರಸಭಾಗವು ಪುರೀಷ ವಾಗಿ ಹೊರತಳ್ಳಲ್ಪಡುವದು. ಮಧ್ಯಮಭಾಗವು ಮಾಂಸವಾಗುವದು. ಸೂಕ್ಷ್ಮ ವಾದ ಭಾಗವು ಮನಸ್ಸಾಗುವದು. ಇದರ ಪರೀಕ್ಷೆಯು ಹೇಗೆಂದರೆ: ಕೆಲವೇ ದಿನ ಗಳು ಊಟವಿಲ್ಲದೆ ನೀರನ್ನು ಮಾತ್ರ ಕುಡಿದುಕೊಂಡು ಬದುಕಿರಬಹುದು. ಆದರೆ ಹಾಗೆ ಉಪವಾಸಮಾಡಿದವನಿಗೆ ಸ್ಮರಣಶಕ್ತಿಯು ಇರುವದಿಲ್ಲ. ವೇದಪಠನಾದಿ ಗಳನ್ನು ಮಾಡಲು ಬರುವದಿಲ್ಲ. ಏಕೆಂದರೆ ಮನಸ್ಸು ತನ್ನ ಬಲವನ್ನು ಕಳೆದು ಕೊಂಡಿರುವದೇ ಕಾರಣವು. ಮತ್ತೆ ಆಹಾರವನ್ನು ತೆಗೆದುಕೊಂಡರೆ ಮನಸ್ಸು ಬಲವಾಗಿ ಎಲ್ಲಾ ಆಲೋಚನೆಗಳು, ವಿದ್ಯಾಪ್ರಕಾಶಗಳಿಗೂ ಮನುಷ್ಯನು ಸಮರ್ಥ ನಾಗುತ್ತಾನೆ. ಇದರಿಂದ ತಿಳಿಯಬರುವದೇನೆಂದರೆ: ಮನಸ್ಸು ಭೌತಿಕವೇ ಹೊರತು ನಿತ್ಯವೂ ನಿರವಯವವೂ ಅಲ್ಲ. ಅದು ತ್ರಿವೃತ್ಕೃತಮಹಾಭೂತಗಳ ವಿಕಾರವು. ಆದರೆ ಉಳಿದ ಇಂದ್ರಿಯಗಳಿಗಿಂತ ಸೂಕ್ಷ್ಮವೂ ಇಂದ್ರಿಯವಿಷಯ ಗಳನ್ನೆಲ್ಲ ವ್ಯಾಪಿಸಿಕೊಂಡಿರುವದೂ ಆಗಿದೆ. ಹೀಗೆಯೇ (೨) ಕುಡಿದ ನೀರು ಸಹ ಮೂರು ಭಾಗವಾಗುತ್ತದೆ. ಅದರಲ್ಲಿಯೂ ಸ್ಥೂಲವಾದದ್ದು ಮೂತ್ರವಾಗಿ ಹೊರಬರುತ್ತದೆ. ಮಧ್ಯಮವಾದದ್ದು ರಕ್ತವಾಗುತ್ತದೆ. ಸೂಕ್ಷ್ಮವಾದದ್ದು ಪ್ರಾಣವಾಗುತ್ತದೆ. ಇದೇ ರೀತಿಯಾಗಿ (೩) ತೇಜಸ್ಸು ಸಹ ಮೂರು ಭಾಗಗಳಾಗಿ ಸ್ಥೂಲವಾದದ್ದು ಅಸ್ಥಿಯಾಗಿಯೂ ಮಧ್ಯಮವಾದದ್ದು ಮಜ್ಜೆ (ಅಸ್ಥಿಯೊಳಗಿರುವ ಜಿಡ್ಡು) ಯಾಗಿಯೂ ಸೂಕ್ಷ್ಮವಾದದ್ದು ವಾಕ್ (ಮಾತು) ಆಗಿಯೂ ಪರಿಣಾಮ ವಾಗುತ್ತದೆ. ಹೀಗೆ ವಾಕ್ಕು, ಪ್ರಾಣ, ಮನಸ್ಸುಗಳು ಮನುಷ್ಯನೊಳಗಡೆ ಇದ್ದು ಕೊಂಡು ತ್ರಿವೃತ್ಕೃತವಾಗಿಯೇ ಕಂಡುಬಂದಿವೆ. ಇದೇ ಪ್ರಕ್ರಿಯೆಯಿಂದ ಸದ್ಬ್ರಹ್ಮ ವನ್ನು ಹುಡುಕುವದು ಹೇಗೆಂದರೆ: ಅನ್ನವೆಂಬ ಕಾರ್ಯವು ಅಪ್ಪಿನಿಂದಾಗಿದೆ; ಅಪ್ಪು ತೇಜಸ್ಸಿನಿಂದಾಗಿದೆ; ತೇಜಸ್ಸು ಬ್ರಹ್ಮದಿಂದಾಗಿದೆ– ಆದ್ದರಿಂದ ಬ್ರಹ್ಮವೇ ಜಗನ್ಮೂಲವು–ಎಂಬಿದು ತ್ರಿವೃತ್ಕರಣದ ಮೂಲಕ ವಿಚಾರಕರಿಗೆ ತಿಳಿದುಬರುತ್ತದೆ. ಜಗತ್ತಿನ ಮೂಲವಸ್ತುಗಳ ಸಂಖ್ಯೆಯು ಕಡಿಮೆಯಾದಂತೆಲ್ಲ ವಿಜ್ಞಾನಿಗಳಿಗೂ ಸಂತೋಷವೇ ಸರಿ. ಏಕೆಂದರೆ ಆಗ ಜಗತ್ತನ್ನರಿಯುವದು ಸುಲಭವಾಗುತ್ತದೆ. ಹೀಗೆ ಜಗತ್ತಿನ ಮೂಲವನ್ನು ಹುಡುಕಲಾರಂಭಿಸಿದ ಋಷಿಗಳು ಕಟ್ಟಕಡೆಯಲ್ಲಿ 'ಸದ್ವಸ್ತುವೊಂದೇ ಪರಮಾರ್ಥವು. ಅದು ಮಾತ್ರವೇ ಎಂದೆಂದಿಗೂ ಇರುವದಾ ಗಿದೆ. ಅದನ್ನು ವಿಭಜಿಸಲಾಗುವದಿಲ್ಲ. ಒಂದು ವೇಳೆ ಅಲ್ಲಿಯೂ ವಿಭಜನೆಯನ್ನು ಕಲ್ಪಿಸಿದರೂ ವಿಭಕ್ತವಾದಂತೆ ಕಂಡುಬಂದವುಗಳೂ ಪೂರ್ಣಬ್ರಹ್ಮವೇ ಆಗಿಬಿಟ್ಟಿರು ತ್ತವೆ'–ಎಂದು ಕಂಡುಕೊಂಡರು. ಇದೇ ತ್ರಿವೃತ್ಕರಣದ ಸಾರವು.

---

# ಸಾಮಾನ್ಯನೀತಿ

**ಕ್ಷತೇ ಪ್ರಹಾರಾ ನಿಪತಂತ್ಯಭೀಕ್ಷ್ಣಂ**
**ಧನಕ್ಷಯೇ ವರ್ಧತೇ ಜಾಠರಾಗ್ನಿಃ ।**
**ಆಪತ್ಸು ವೈರಾಣಿ ಸಮುದ್ಭವಂತಿ**
**ಛಿದ್ರೇಷ್ವನರ್ಥಾ ಬಹುಲೀಭವಂತಿ ॥೧॥**

೧. ಗಾಯದ ಮೇಲೆಯೇ ಮತ್ತೆ ಮತ್ತೆ ಗಾಯವಾಗುವದು, ಹಣವು ಬರಿದಾದಾಗ ಹಸಿವು ಹೆಚ್ಚಾಗುವದು, ಕಷ್ಟಕಾಲವು ಬಂದಾಗಲೇ ಶತ್ರುಭಾವಗಳು ಹೊಸದಾಗಿ ಹುಟ್ಟಿಕೊಳ್ಳುವದು- ಹೀಗೆ ಸಂಕಟದಲ್ಲಿ ಬೇಡವಾದ ಘಟನೆಗಳೇ ಹೆಚ್ಚಾಗಿ ಸಂಭವಿಸುವವು.

**ಅರ್ಥಾತುರಾಣಾಂ ನ ಗುರುರ್ನ ಬಂಧುಃ**
**ಕಾಮಾತುರಾಣಾಂ ನ ಭಯಂ ನ ಲಜ್ಜಾ ।**
**ವಿದ್ಯಾತುರಾಣಾಂ ನ ಸುಖಂ ನ ನಿದ್ರಾ**
**ಕ್ಷುಧಾತುರಾಣಾಂ ನ ರುಚಿರ್ನ ವೇಲಾ ॥೨॥**

೨. ಹಣದ ಆತುರವಿರುವವರಿಗೆ ಗುರು, ಬಂಧು- ಎಂಬ ವಿವೇಚನೆಯಿರು ಯಿರುವದಿಲ್ಲ. ಹಾಗೆಯೇ ಕಾಮಾತುರರಾದವರಿಗೆ ಭಯವಾಗಲಿ, ನಾಚಿಕೆಯಾಗಲಿ, ವಿದ್ಯಾರ್ಥಿಯಾದವನಿಗೆ ಸುಖಭೋಗಗಳ ಮತ್ತು ನಿದ್ರೆಯಕಡೆಗೆ ಗಮನವಾಗಲಿ- ಇರುವದಿಲ್ಲ. ಮತ್ತು ಹಸಿದವನಿಗೂ ರುಚಿ ಹಾಗೂ ಸಮಯದ ಗಣನೆಯಿರುವದಿಲ್ಲ.

**ಯತ್ರಾಸ್ತಿ ಲಕ್ಷ್ಮೀರ್ವಿನಯೋ ನ ತತ್ರ**
**ಅಭ್ಯಾಗತೋ ಯತ್ರ ನ ತತ್ರ ಲಕ್ಷ್ಮೀಃ ।**
**ಉಭೌ ಚ ತೌ ಯತ್ರ ನ ತತ್ರ ವಿದ್ಯಾ**
**ನೈಕತ್ರ ಸರ್ವೋ ಗುಣಸಂನಿಪಾತಃ ॥೩॥**

೩. ಐಶ್ವರ್ಯವಿದ್ದಲ್ಲಿ ವಿನಯವಿರುವದಿಲ್ಲ. ಅತಿಥಿಗಳಿದ್ದಲ್ಲಿ ಧನವಿರುವದಿಲ್ಲ. ಎರಡೂ ಇದ್ದರೆ ವಿದ್ಯೆಯಿರುವದಿಲ್ಲ. ಹೀಗೆ ಒಂದೇ ಕಡೆಯಲ್ಲಿ ಗುಣಗಳೆಲ್ಲವೂ ಕೂಡಿರುವದಿಲ್ಲ.

**ದ್ವಾರಿ ಪ್ರವಿಷ್ಟಃ ಸಹಸಾ ತತಃ ಕಿಂ**
**ದೃಷ್ಟಃ ಪ್ರಭುಃ ಸ್ಮೇರಮುಖಃ ತತಃ ಕಿಮ್ ।**
**ಕಥಾ ಶ್ರುತಾ ಶ್ರೋತ್ರರಸಾ ತತಃ ಕಿಂ**
**ವ್ಯಥಾ ನ ಶಾಂತಾ ಯದಿ ಜಾಠರೀಯಾ ॥೪॥**

೪. ಯಜಮಾನನು ಬಾಗಿಲಲ್ಲೇ ಭೇಟಿಯಾದರೇನು? ಅವನು ಮುಗುಳುನಗೆ ನಕ್ಕರೇನು ? ಕಿವಿಗಿಂಪಾಗಿ ಮಾತನಾಡಿದರೇನು ? ಹೊಟ್ಟೆಯ ಸಂಕಟವನ್ನು ತಣ್ಣಗೆ ಮಾಡದಿದ್ದಲ್ಲಿ ಫಲವೇನು ?

—— ——

# ಸತ್ಯಕಾಮನ ಪತ್ರಗಳು

## ವಿಚಾರಣೆಯನ್ನು ಎದುರಿಸುವದು

"ನಾನೊಬ್ಬ ಅಧಿಕಾರಿ ; ಜವಾಬ್ದಾರಿಯುತವಾದ ಸ್ಥಾನದಲ್ಲಿದ್ದೆನು. ಈಚೆಗೆ ನನ್ನ ದುರದೃಷ್ಟದಿಂದ ಮೇಲಿನವರು ನನ್ನನ್ನು ಕೈಬಿಟ್ಟಿದ್ದಾರೆ. ಇನ್ನುಮುಂದೆ ವಿಚಾರಣೆಯನ್ನೂ ಮಾಡಬಹುದು. ಮಾನವಸಹಜವಾದ, ಈಗಿನ ವಾತಾವರಣ ದಲ್ಲಿ ಸರ್ವಸಾಮಾನ್ಯವಾದ ಕೆಲವು ನ್ಯೂನತೆಗಳು ನನ್ನಲ್ಲೂ ಇರಬಹುದು. ದೇವರ ನ್ನು ನಾನು ಸಂಪೂರ್ಣವಾಗಿ ನಂಬಿರುವವನು. ತೀರ ಕೆಳಮಟ್ಟದಿಂದ ಉನ್ನತ ಸ್ಥಿತಿಗೆ ಏರಿದ್ದೂ ದೇವರ ದಯೆಯಿಂದಲೇ- ಎಂದು ಪೂರ್ಣನಂಬಿಕೆಯಿದೆ. ಈಗ ನಾನು ಮತ್ತೆ ಚೇತರಿಸಿಕೊಳ್ಳಲು ಹಾಗೂ ಆಪಾದನೆಗಳನ್ನು ಎದುರಿಸಿ ಕಷ್ಟಗಳಿಂದ ಪಾರಾಗಲು ಏನು ಮಾಡಬೇಕೆಂಬುದನ್ನು ತಿಳಿಸಬಲ್ಲಿರಾ ?" ಎಂದು ಕೇಳಿ ನೀವು ಬರೆದಿರುವ ಪತ್ರವು ತಲುಪಿದೆ.

ಮನುಷ್ಯನಿಗೆ ಸಂಭವಿಸಬಹುದಾದ ದೈಹಿಕ, ವ್ಯಾವಹಾರಿಕ, ಸಾಮಾಜಿಕ ಸಂಕಟಗಳೆಲ್ಲವೂ ಅವನ ಅತಿಯಾದ ಅಪವ್ಯಯದಿಂದಲೇ ಎಂದು ಬಲ್ಲವರು ಹೇಳು ತ್ತಾರೆ. ದೇವರು ಒಮ್ಮೆ ಮಾನವನಿಗೆ ಆರೋಗ್ಯ, ಧನ, ಅಧಿಕಾರ, ಗೌರವಾದಿಗಳನ್ನು ಕೊಟ್ಟು ಅವುಗಳನ್ನು ಹೇಗೆ ಉಪಯೋಗಿಸಿಕೊಳ್ಳುತ್ತಾನೆಂಬುದನ್ನು ಪರೀಕ್ಷಿಸು ತ್ತಾನೆ. ಆಗ ಮಾನವನು ದುಶ್ಚಟಗಳು, ದುರಾಹಾರಗಳು, ಕಾಲವನ್ನು ಮೀರಿ ದೈನಂದಿನಕೆಲಸಗಳಲ್ಲಿ ತೊಡಗುವದು, ಔದಾರ್ಯದ ಹೆಸರಿನಲ್ಲಿ ದುಂದುವೆಚ್ಚ ಮಾಡುವದು, ಸಜ್ಜನರ ಸಹವಾಸವನ್ನು ಮಾಡದಿರುವದು, ಸದ್ಗ್ರಂಥಗಳನ್ನು ಅವಲೋಕಿಸದಿರುವದು- ಮುಂತಾದ ರೀತಿಗಳಿಂದ ದಾರಿ ತಪ್ಪಿ ನಡೆದರೆ ಮತ್ತೆ ಅವನನ್ನು ಉದ್ಧರಿಸುವದಕ್ಕಾಗಿಯೇ ಸಂಕಟಗಳನ್ನೂ ದೇವರೇ ತಂದೊಡ್ಡುತ್ತಾನೆ. ಇಂಥ ಸಂದರ್ಭಗಳಿಂದಲಾದರೂ ಸಾಧಕನು ಎಚ್ಚತ್ತುಕೊಳ್ಳಲೇ ಬೇಕು. ಇಲ್ಲವಾದರೆ ದೇವರು ಅಂಥವನನ್ನು ಕೈಬಿಟ್ಟಂತೆಯೇ-ಎಂದು ತಿಳಿಯಿರಿ. ದೇವರಲ್ಲಿ ನಂಬಿಕೆ ಎಂದರೆ 'ನೀವು ಮಾಡಿದ್ದನ್ನೆಲ್ಲ ಸಹಿಸಿಕೊಂಡು ಮೇಲಿಂದ ಮೇಲೆ ನಿಮಗೆ ಇನ್ನೂ ಹೆಚ್ಚು ಹೆಚ್ಚು ಅನುಕೂಲವನ್ನೇ ಮಾಡಿಕೊಡುವಂತೆ ದೇವರನ್ನೇ ವಶಗೊಳಿಸಿಕೊಳ್ಳುವಿಕೆ'- ಎಂಬರ್ಥವು ತಪ್ಪು. ಏಕೆಂದರೆ ಈಶ್ವರನಿಯಮದಂತೆ ಜೀವರುಗಳ ಕರ್ಮಗಳಿಗನು ಗುಣವಾಗಿ ಫಲವಾಗುತ್ತದೆಯೇ ಹೊರತು ಈಶ್ವರನು ನಡುವೆ ಪ್ರವೇಶಿಸಿ ದುಷ್ಕ ರ್ಮಗಳಿಗೂ ಸತ್ಫಲವನ್ನುಂಟುಮಾಡುವಂಥ ಹಸ್ತಕ್ಷೇಪವನ್ನು ಖಂಡಿತವಾಗಿಯೂ ಮಾಡುವದಿಲ್ಲ. ಈಗಲಾದರೂ ನೀವು ಈ ನಿಯಮನ್ನರಿತು ನಿಮ್ಮ ದೌರ್ಬಲ್ಯಗಳಿಂದ ಹಿಂದಿರುಗಬೇಕು. ಇಲ್ಲವಾದರೆ ನಿಮ್ಮ ದೈವಭಕ್ತಿಗೆ ಬೆಲೆಯೇ ಇಲ್ಲ. ದುಶ್ಚರಿತಗಳ ವಿಷಯಕ್ಕೆ ನಿಮಗೆ ಸಕಾಲದಲ್ಲಿ ಯಾರೂ ಎಚ್ಚರಿಕೆ ಕೊಡಲಿಲ್ಲವೆ ? ನೀವಾದರೂ ಆತ್ಮಪರೀಕ್ಷೆಯಿಂದ ಅಥವಾ ನಿಮ್ಮ ಒಡನಾಡಿಗಳಲ್ಲಿ ಗಣ್ಯರಾದ ಜನರ ಅನುಕರಣೆ ಯಿಂದ ತಿದ್ದಿಕೊಳ್ಳಬಹುದಾಗಿತ್ತಲ್ಲವೆ ? ಏಕೆಂದರೆ ಅಪ್ರಿಯವಾದ ಸತ್ಯವನ್ನು ಸಜ್ಜನರು ನುಡಿಯುವದಿಲ್ಲವಲ್ಲವೆ ?

ಈಗ ನೀವು ಮಾಡಬಹುದಾದದ್ದನ್ನು ನನಗೆ ತೋಚಿದಂತೆ ತಿಳಿಸುವೆನು. ಗುಣಾಂಶಗಳನ್ನು ಸ್ವೀಕರಿಸಿರಿ. ತಪ್ಪು ಯಾರದ್ದೇ ಆಗಿರಲಿ, ಹೊಣೆಗಾರಿಕೆಯು ನಿಮ್ಮನ್ನು ಬಿಡಲಾರದೆಂದು ಕಂಡುಬಂದರೆ "ಅರ್ಧಂ ತ್ಯಜತಿ ಪಂಡಿತಃ" ಎಂಬ ನ್ಯಾಯದಂತೆ ವಿಚಾರಣೆಯ ಕಾಲಕ್ಕೆ ಹೊರಿಸಬಹುದಾದ ನ್ಯೂನತೆಗಳನ್ನು ನಿಮ್ಮ ಸ್ವಂತ ಆಸ್ತಿ-ಮುಂತಾದವುಗಳಿಂದ ತುಂಬಿ ಬಿಡುಗಡೆಮಾಡಿಕೊಳ್ಳಿರಿ. ಅನಂತರ ಆಪ್ತರಾದವರಲ್ಲಿ ಮಾತ್ರ ನಿಮ್ಮ ಸಂಕಟಗಳನ್ನು ಸೂಕ್ಷ್ಮವಾಗಿ ವಿವರಿಸಿ ಅವರಾಗಿಯೇ ನೀಡಬಹುದಾದ ಯಥೋಚಿತ ಸಹಾಯಹಸ್ತವನ್ನು ಸದುಪಯೋಗಮಾಡಿಕೊಂಡು ಕೆಲವು ಕಾಲ ಎಲೆ ಮರೆಯ ಕಾಯಿಯಂತೆ ಇರಿ. ಹೊಸದಾಗಿ ಯಾವದೇ ಸಾಲ ಸೋಲು ಜವಾಬ್ದಾರಿಗಳನ್ನೂ ಹೊತ್ತುಕೊಳ್ಳಲು ಹೋಗಬೇಡಿರಿ. ಇಂಥ ಕಷ್ಟ ಕಾಲದಲ್ಲಿ ಹಿಂದೆ ನೀವು ಯಾರು ಯಾರಿಗೆ ಉಪಕಾರವನ್ನು ಮಾಡಿರಬಹುದೋ ಅಂಥವರಲ್ಲಿ ನಿಮಗೆ ಈಗ ಯಾರು ಯಾರು ಬೆಂಬಲವನ್ನೀಯುತ್ತಾರೆಂಬುದನ್ನೂ ಗುರುತಿಸಿರಿ. ಉಳಿದವರೆಲ್ಲರೂ ಸ್ವಾರ್ಥಿಗಳೆಂದು ಗೊತ್ತಾಗಿಬಿಡುವದರಿಂದ ಮತ್ತೆ ಅಂಥವರನ್ನು ಹತ್ತಿರಕ್ಕೆ ಸೇರಿಸಬೇಡಿರಿ. ಪ್ರಪಂಚದ ಈ ಆಗುಹೋಗುಗಳಿಗಾಗಿ ಎಂದಿಗೂ ನೀವು ಆತ್ಮವಿಶ್ವಾಸವನ್ನು ಕಳೆದುಕೊಳ್ಳಬೇಡಿರಿ. ಇನ್ನು ಮುಂದೆ ಭಗವಂತನನ್ನು ನೆನೆಯುವಾಗ ಹಿಂದಿನ ತಪ್ಪುಗಳನ್ನೆಲ್ಲ ಮನ್ನಿಸುವಂತೆಯೂ ಮತ್ತೆ ಇಂಥ ತಪ್ಪುಗಳನ್ನು ಮಾಡದಂತೆ ಸದ್ಬುದ್ಧಿಯನ್ನು ಕೊಡುವಂತೆಯೂ ಬೇಡಿಕೊಳ್ಳಿರಿ. ಆದರೆ ಕಾಮ್ಯವಾದ ಯಾವ ಬೇಡಿಕೆಗಳನ್ನೂ ದೇವರ ಮುಂದೆ ಇಡಬೇಡಿರಿ.

ಇನ್ನು ಅಧ್ಯಾತ್ಮದೃಷ್ಟಿಯಿಂದ ಹೇಳುವದಾದರೆ ನೀವು ಆತ್ಮವಿಶ್ವಾಸವನ್ನು ಮೂಡಿಸಿಕೊಳ್ಳುವದಕ್ಕಾಗಿ ಕೆಲವು ಸದ್ಗ್ರಂಥಗಳನ್ನೂ ಮಹಾತ್ಮರ ಚರಿತ್ರೆಗಳೇ ಮುಂತಾದ ಸಾಹಿತ್ಯವನ್ನೂ ಓದಿರಿ. ಕನಿಷ್ಠಮಟ್ಟದ ಖರ್ಚು ಬರುವಂಥ ದೇವರ ಸೇವೆಗಳನ್ನಾಗಲೀ ಅಥವಾ ನೀವೇ ಖುದ್ದಾಗಿ ಮಾಡಬಹುದಾದಂಥ ಜಪ, ಪಾರಾಯಣ ಆಹ್ನಿಕ-ಗಳನ್ನಾಗಲಿ ಅನುಷ್ಠಾನಕ್ಕೆ ತನ್ನಿರಿ. ತೀರ ಅಗತ್ಯವಾದ ಖರ್ಚುಗಳು ಹೊರತು ಉಳಿದೆಲ್ಲ ವೆಚ್ಚಗಳಿಗೂ ಕಡಿವಾಣವನ್ನು ಹಾಕಿರಿ. ಮತ್ತೊಮ್ಮೆ ಈಶ್ವರನ ಕೃಪೆಯನ್ನು ಹೃದಯದಲ್ಲಿಟ್ಟುಕೊಂಡು ವ್ಯಾವಹಾರಿಕವಾದ ಪ್ರಯತ್ನಗಳಿಂದ ಉದ್ಯೋಗಶೀಲರಾಗಿರಿ. ಭಗವಂತನು ಅಜ್ಞರಾದ ಕರ್ಮತ್ಯಾಗಿಗಳನ್ನು ಪ್ರೀತಿಸುವದಕ್ಕಿಂತ ಹೆಚ್ಚಾಗಿ ಕರ್ಮಯೋಗಿಗಳನ್ನೇ ಪ್ರೀತಿಸುತ್ತಾನೆಂದು ಅಧ್ಯಾತ್ಮಶಾಸ್ತ್ರವು ತಿಳಿಸುತ್ತದೆ. ನಿಮಗೆ 'ಋಣಭಯ' ವಿದ್ದರೆ ಅದನ್ನು ಒಳ್ಳೆಯದೆಂದೇ ತಿಳಿಯಿರಿ. ಏಕೆಂದರೆ ಅದರಿಂದ ಬಿಡುಗಡೆಯಾಗಬೇಕೆಂಬ ಚಿಂತೆಯು ನಿಮಗೆ ಹೆಚ್ಚಿದಷ್ಟೂ ನೀವು ಪರಿಶುದ್ಧರಾಗುವಿರಿ. ಅದಕ್ಕಾಗಿ ನೀವು ಪ್ರಯತ್ನ ಮಾಡಿದಾಗ ದೇವರು ಕೂಡ ಸಹಾಯಮಾಡುವನು. ಒಟ್ಟಿನಲ್ಲಿ ಸಾತ್ತ್ವಿಕ ಮಾರ್ಗದಿಂದಲೇ ಭಗವಂತನನ್ನೇ ನಂಬಿ, ಪರಿಶುದ್ಧಜೀವನದಿಂದ, 'ಬಂದದ್ದೆಲ್ಲ ಬರಲಿ, ಗೋವಿಂದನ ದಯೆಯೊಂದಿರಲಿ'-ಎಂದು ಭಾವಿಸುತ್ತಾ ಮುಂದಿನ ದುರ್ದಿನಗಳನ್ನು ದಾಟಿ ದುರ್ಗಗಳಿಂದ ಪಾರಾಗಿರಿ. ——

# ಆರಿಸಿದ ಅರಳುಮೊಗ್ಗುಗಳು

( ಉಪನಿಷತ್ಸಂದೇಶ-ಎಂಬ ಗ್ರಂಥದಿಂದ )

೧. ಪ್ರವಚನ-ಎಂದರೆ ಪದಶಃ ಅರ್ಥಬೋಧನೆಮಾಡಿ ಅಭಿಪ್ರಾಯವನ್ನು ವಿಚಾರಿಸುವಿಕೆ. ಆದರೆ ಸಂಕುಚಿತಾರ್ಥದಲ್ಲಿ ವೇದಾಧ್ಯಯನ-ಅಧ್ಯಾಪನಗಳನ್ನೂ ತಿಳಿಸುತ್ತದೆ. ಕೇವಲ ವೇದಶಾಸ್ತ್ರಗಳ ಅಧ್ಯಯನ-ಪ್ರವಚನಗಳಿಂದ ಆತ್ಮನು ಸಿಗುವದಿಲ್ಲವೆಂದು ಯಮನು ತಿಳಿಸಿರುತ್ತಾನೆಂದು ಕಠೋಪನಿಷತ್ತಿನಲ್ಲಿದೆ. ವೇದಗಳಲ್ಲಿಯೇ ಹೀಗೆ ವೇದಮಂತ್ರಪಠನಾದಿಗಳಿಂದ ಆತ್ಮಲಾಭವಾಗುವದಿಲ್ಲವೆಂದು ಹೇಳಿದ್ದರೆ ಆಶ್ಚರ್ಯವಲ್ಲವೆ ? ಜಗತ್ತಿನ ಬೇರೆಯ ಯಾವ ಶಾಸ್ತ್ರಗಳಿಗೂ ತಮ್ಮನ್ನು ತಾವೇ ಹೀಗೆ ಹೇಳಿಕೊಳ್ಳುವ ಧೈರ್ಯವಿಲ್ಲ. ಆದರೆ ಇಂಥ ಧೈರ್ಯವು ಉಪನಿಷತ್ತುಗಳಿಗೆ ಮಾತ್ರವೇ ಬಂದಿರುವದು ಅವುಗಳ ಆಧ್ಯಾತ್ಮಿಕವಾದ ಕಟ್ಟಾಸೆಯ ಫಲವಾಗಿದೆ. ವಸ್ತುನಿಷ್ಠವಾದ ದೃಷ್ಟಿಯೂ ನಿಸ್ಸಂಗತ್ವವೂ ಈ ಹೇಳಿಕೆಗೆ ಪ್ರೇರಕವಾಗಿವೆ. ಶ್ರೀರಾಮಕೃಷ್ಣರು ಈ ಸಂದರ್ಭದಲ್ಲಿ ತಿಳಿಸುವದೇನೆಂದರೆ : "ಪಂಚಾಂಗಗಳಲ್ಲಿ ಮಳೆಯನಕ್ಷತ್ರಗಳನ್ನು ಗುರುತಿಸಿ ವೃಷ್ಟಿಯೋಗವನ್ನು ತಿಳಿಸಿರುವದು ನಿಜ. ಆದರೆ ಪಂಚಾಂಗವನ್ನೇ ಯಾರಾದರೂ ಹಿಂಡಿದರೆ ಒಂದು ಹನಿಯ ನೀರೂ ಬರಲಾರದು. ಹಾಗೆಯೇ ಪ್ರವಚನಾದಿಗಳನ್ನೂ ಯಾವದೇ ಅಂತರಂಗಸಾಧನೆಗಳಿಲ್ಲದೆ ಮಾಡುತ್ತಿದ್ದರೆ ಆತ್ಮಸಾಕ್ಷಾತ್ಕಾರವಾಗುವದಿಲ್ಲವೆಂದು ತಿಳಿಯಬೇಕು." ಇದು ನಿಜವಾಗಿಯೂ ಈಗ್ಗೆ ನಾವು ವಿಚಾರಮಾಡಬೇಕಾದದ್ದು. ಇಷ್ಟೇ ಅಲ್ಲ ; ಉಪನಿಷತ್ತು ಇನ್ನೂ ಮುಂದುವರೆದು ಮೇಧೆ (ಧಾರಣೆ)ಯಿಂದಾಗಲಿ ಬಹಳವಾದ ಶ್ರವಣದಿಂದಾಗಲಿ- ಆತ್ಮನು ಸಿಗುವದಿಲ್ಲವೆಂದೇ ತಿಳಿಸುತ್ತದೆ.

ಹಾಗಾದರೆ ಪ್ರವಚನ-ಮೇಧಾ-ಶ್ರವಣಗಳನ್ನೆಲ್ಲ ಒಟ್ಟುಗೂಡಿಸಿದರೆ ಆತ್ಮಲಾಭವೂ ಅಧ್ಯಾತ್ಮಜೀವನದ ಪೂರ್ಣತೆಯೂ ದೊರೆಯಬಹುದೆ ? ಎಂದರೆ ಅದೂ ಸಾಧ್ಯವಿಲ್ಲವೆಂದೇ ಯಮನ ಉತ್ತರವಾಗಿದೆ. ಏಕೆಂದರೆ ಅಸಮಗ್ರವಾದ ನಾಲ್ಕಾರು ಸಾಧನಗಳು ಕೂಡಿದರೆ ಸಮಗ್ರವಾದ ಸತ್ಯವಾಗುವದಿಲ್ಲ. ಆತ್ಮನೆಂಬುದು ಜಾಣತನದಿಂದ ಕಂಡುಕೊಳ್ಳಬೇಕಾದ ವಸ್ತುಗಳಲ್ಲಿ ಒಂದಾಗಿರುವದಿಲ್ಲ. ಹಾಗಿದ್ದಿದ್ದರೆ ಕಾಣಬಹುದಿತ್ತು. ನಿಜವೇನೆಂದರೆ ಯಾವನು ಆತ್ಮನನ್ನು ಕಂಡುಕೊಳ್ಳಲು ಹೊರಟಿರುವನೋ ಅವನ ಸ್ವರೂಪವೇ ಅದಾಗಿಬಿಟ್ಟಿದೆ. ಈ ರಹಸ್ಯವು ತಿಳಿಯಬೇಕಾದರೆ ಪ್ರವಚನಾದಿಗಳ ಜೊತೆಗೆ ಮನನವೂ ಧ್ಯಾನವೂ (ನಿದಿಧ್ಯಾಸನವೂ) ಇದೇ ಹಾದಿಯಲ್ಲಿ ತತ್ತ್ವವನ್ನು ಕಂಡುಕೊಂಡಿರುವಂಥ ಅನುಭವಿಗಳ ಮಾರ್ಗದರ್ಶನವೂ ಬೇಕು. ಎಲ್ಲಕ್ಕಿಂತ ಮಿಗಿಲಾಗಿ 'ಆತ್ಮನೇ ಬೇಕು' ಎಂಬ ದೃಢವಾದ ನಿಶ್ಚಯವೂ ಪ್ರಯತ್ನವೂ ಬೇಕಾಗಿದೆ. 'ಆತ್ಮನೂ ಬೇಕು' ಎಂಬ ಆಸೆಯು ಆತ್ಮಪ್ರಾಪ್ತಿಗೆ ಸಾಕಾಗಲಾರದು.

---

# ಮನಸ್ಸಿಗೆ ಉಪದೇಶ

(ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

೬೦. ಎಲೈ ಮನವೆ, ನಿನಗೆ ಎಷ್ಟು ಜನ್ಮಗಳಲ್ಲಿ ಎಷ್ಟು ಶರೀರಗಳು ಬಂದಿವೆಯೋ ಒಂದೊಂದು ಜನ್ಮದಲ್ಲಿ ಆಯಾ ಶರೀರವು ಎಷ್ಟು ಅವಸ್ಥೆಗಳನ್ನು ಅನುಭವಿಸಿರುವದೋ ಆ ಶರೀರದಲ್ಲಿದ್ದಾಗ ನಿನಗೆ ಎಷ್ಟು ಕನಸುಗಳು ಆಗಿವೆಯೋ ಆ ಕನಸುಗಳಲ್ಲಿ ಎಷ್ಟು ಶರೀರಗಳನ್ನು ನಾನುನನ್ನದೆಂದು ಮೋಹಗೊಂಡಿರುವೆಯೋ ಅದರ ಲೆಕ್ಕವಾದರೂ ಸಿಕ್ಕಿದೆಯೆ ? ಅವುಗಳಲ್ಲಿ ನೀನು ಯಾರು ?

೬೧. ಈ ಒಂದೊಂದು ಶರೀರಕ್ಕೆ ಸಂಬಂಧಪಟ್ಟಿರುವ ಹೆಂಡತಿ, ಮಕ್ಕಳು, ಹೊಲ, ಮನೆ, ಹಣ, ಆಳುಕಾಳು- ಇವುಗಳಲ್ಲಿ ಆಗ ಎಷ್ಟು ಮೋಹವನ್ನು ತೋರಿಸಿರುವೆ ? ಅದನ್ನು ಒಂದಿಷ್ಟು ಯೋಚಿಸಿಕೊಳ್ಳಬಾರದೆ ?

೬೨. ಎಲೆ ಮನಸ್ಸೆ, ನಿನ್ನ ಹರಿದಾಟಕ್ಕೆಲ್ಲ ಆಸರೆಯನ್ನು ಕೊಟ್ಟಿರುವ ಶ್ರೀಹರಿಯು ನಿನ್ನ ಹಿಂತಡಿಕೆಯಾಗಿಯೇ ಎಂದೆಂದಿಗೂ ಇರುತ್ತಾನೆ. ಆತನನ್ನು ಒಮ್ಮೆಯಾದರೂ ಕಾಣಬೇಕೆಂಬ ಹಂಬಲು ನಿನಗೇಕೆ ಬರಲಿಲ್ಲ ?

೬೩. ಎಲೆ ಮನವೆ, ನಿನಗೆ ಯಾವದರಲ್ಲಿ ಪ್ರೇಮವಿರುವದೋ ಅದನ್ನೇ ನೀನು ಹೆಚ್ಚಾಗಿ ನೋಡುತ್ತಿರುವೆ. ಅದರಲ್ಲಿಯೇ ಇರಬೇಕೆಂದು ಹಂಬಲಿಸುವೆ. ಅದರ ಆಕಾರವನ್ನೇ ತಳೆದುಬಿಡುವೆ. ಇದು ನಿನ್ನ ಸ್ವಭಾವವೆಂಬುದನ್ನು ಮರೆಯದಿರು.

೬೪. ನಿನಗೆ ಹೊಸಹೊಸತಾದ ರೂಪಗಳು, ಶಬ್ದಗಳು, ಸ್ಪರ್ಶಗಳು ಬೇಕೆನಿಸುತ್ತಿರುವವು. ಆದ್ದರಿಂದ ಅವುಗಳ ಚಿಂತನೆಯಿಂದ ಅವುಗಳ ಆಕಾರವನ್ನೇ ಹೊಂದುತ್ತಿರುವೆ. ನಿಜವಾಗಿ ನೀನು ಪಡೆದುಕೊಂಡ ಯಾವ ಶಬ್ದಸ್ಪರ್ಶರೂಪಾದಿಗಳೂ ನಿನ್ನ ಹೊರಗಿಲ್ಲ. ಎಲ್ಲವೂ ನೀನು ಹಾಕಿಕೊಂಡಿರುವ ವೇಷಮಾತ್ರವೇ ಆಗಿರುತ್ತದೆ.

೬೫. ನೀನು ಗೆಳೆಯರು, ಹಗೆವರು, ಮಿಕ್ಕವರು, ಆಗದವರು, ನೆಂಟರು, ಬೇಕಾದವರು- ಎಂದು ಕಲ್ಪಿಸಿಕೊಳ್ಳುವದೂ ನಿನ್ನ ಈ ಹುಚ್ಚುಪ್ರೇಮದ ಫಲವೇ. ಇಲ್ಲದ ಭೇದಗಳನ್ನು ಕಲ್ಪಿಸಿಕೊಂಡು ಸಂಕಟಪಡುವದರಲ್ಲಿಯೂ ನಿನಗೆ ಯಾವದೋ ಸುಖವು ಸಿಕ್ಕೀತೆಂಬ ಬಯಲುಭ್ರಮೆ ನಿನಗಿದೆ.

೬೬. ಎಲೆ ಮನಸ್ಸೆ, ಕಲ್ಪಿತವಸ್ತುಗಳೆಲ್ಲ ನಿನ್ನ ಆಕಾರಮಾತ್ರಗಳೇ. ಅವು ನಿನಗಿಂತ ಎಂದಿಗೂ ಬೇರೆಯಾಗಿರುವದಿಲ್ಲ. ಆದ್ದರಿಂದಲೇ ಅವುಗಳಿಂದ ನಿನಗೆ ತೃಪ್ತಿಯಾಗದೆ ಇದೆ. ನೀನು ಎಲ್ಲಿಗೆ ಹೋದರೂ ನಿನ್ನಿಂದ ಹೊರಕ್ಕೆ ಹೋಗಲಾರೆ. ನಿನ್ನ ಆಕಾರದಿಂದ ನಿನಗೆ ತೃಪ್ತಿಯು ಸಿಗಲೊಲ್ಲದು. ನಿನ್ನ ಪ್ರೇಮಕ್ಕೆ ತಕ್ಕದ್ದು ಶಾಶ್ವತವಾಗಿ ಯಾವದೂ ನಿನಗೆ ಈವರೆಗೆ ದೊರೆತೇ ಇಲ್ಲ. ನಿನ್ನ ಮೂಲವಾದ ಒಂದು ಆನಂದದ ಬುಗ್ಗೆಯಿದೆ. ಆ ಮೂಲದ ಕಡೆಗೆ ತಿರುಗು. ನೀನೇ ಆನಂದದ ಮೂರ್ತಿಯಾಗುವೆ.

---

# ಉದ್ವೇತಿ ಪ್ರಸವೀತಾ ಜನಾನಾಮ್

( ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್ ಲಕ್ಷ್ಮೀನರಸಿಂಹಮೂರ್ತಿಗಳು )

ಸೌರಸೂಕ್ತಗಳ ಮಂತ್ರಾರ್ಥಗಳನ್ನು ವಿಚಾರಮಾಡುತ್ತಿರುವ ಲೇಖನ ಮಾಲೆಯಲ್ಲಿ ಋಗ್ವೇದದ ೫-೫-೫-೨ ನೆಯ ಮಂತ್ರವನ್ನು ಈಗ ನೋಡೋಣ.

**ಓಂ ॥ ಉದ್ವೇತಿ ಪ್ರಸವೀತಾ ಜನಾನಾಂ ಮಹಾನ್ ಕೇತುರರ್ಣವಃ**
**ಸೂರ್ಯಸ್ಯ । ಸಮಾನಂ ಚಕ್ರಂ ಪರ್ಯಾವಿವೃತ್ಸನ್**
**ಯದೇತಶೋ ವಹತಿ ಧೂರ್ಷು ಯುಕ್ತಃ ॥**

"ಮಹಾಂತನೂ ಎಲ್ಲರನ್ನೂ ಜಾಗೃತಗೊಳಿಸುವವನೂ ಉದಕಪ್ರದನೂ ಕರ್ಮಗಳಿಗೆ ಅನುಜ್ಞೆಯನ್ನು ಕೊಡುವವನೂ ಆದ ಸೂರ್ಯನು ಉದಯಿಸಿ ಬರುತ್ತಿರುವನು. ಹಾಗೂ ಆತನು ಹರಿತವರ್ಣದ ಕುದುರೆಯು ಎಳೆಯುತ್ತಿರುವ ಒಂದೇ ಚಕ್ರದ ರಥವನ್ನು ತಿರುಗಾಡಿಸಲು ಇಚ್ಛಿಸುತ್ತಾ ಎದುರಾಗುತ್ತಿರುವನು" ಎಂದಭಿಪ್ರಾಯ.

ಈ ಮಂತ್ರದಲ್ಲಿ ಮೊದಲು 'ಕೇತು'ವೆಂದು ಆದಿತ್ಯನನ್ನು ಹೆಸರಿಸಿದೆ. ಕೇತುವೆಂದರೆ ಬಾವುಟವೆಂದರ್ಥ. ಹೇಗೆ ಬಾವುಟಕ್ಕೆ ಈಗಲೂ ಪೂರ್ಣಗೌರವವುಂಟೋ, ಯಾವದಾದರೂ ಸಾರ್ವಜನಿಕಸಮಾರಂಭಗಳಲ್ಲಿ ಆಯಾ ಸಂದರ್ಭದ ನೆನಪಿಗಾಗಿ ಬಾವುಟವನ್ನು ಹಾರಿಸಿ ವಂದನೆಗಳನ್ನು ಸಲ್ಲಿಸುವರೋ ಹಾಗೆಯೇ "ಅಹ್ನಾಂ ಕೇತುಃ" ಹಗಲುಗಳಿಗೆ ಬಾವುಟದಂತಿರುವ ಸೂರ್ಯನು ಪ್ರತಿದಿನವೂ 'ನವೋ ನವೋ ಭವತಿ ಜಾಯಮಾನಃ' ಹುಟ್ಟುತ್ತಾ ಹೊಸಬನಾಗಿಯೇ ತೋರಿಕೊಳ್ಳುತ್ತಿರುವನು. ಇಂಥವನಿಗೆ ನಾವು ಪ್ರಪ್ರಥಮವಾಗಿ ವಂದನೆಗಳನ್ನು ಸಲ್ಲಿಸಬೇಡವೆ ? ಇಷ್ಟೇ ಅಲ್ಲ. ಬಾವುಟವು ಮೇಲೆ ಗಾಳಿಯಲ್ಲಿ ಹಾರಾಡುತ್ತಾ, ಅದು ಗೋಚರಿಸಿದಂತೆಲ್ಲ ಅದನ್ನು ಕಂಡ ಜನರು ಮೇಲೆದ್ದು ಉತ್ಸಾಹದಿಂದ 'ಓಹೋ, ಈ ದಿನ ಸ್ವಾತಂತ್ರ್ಯದಿನಾಚರಣೆ' ಇತ್ಯಾದಿಯಾಗಿ ನೆನೆಸಿಕೊಂಡು ಆನಂದಿಸುವಂತೆ ಸೂರ್ಯನನ್ನು ಕಂಡ ಪ್ರಾಣಿಗಳೆಲ್ಲವೂ ಚಟುವಟಿಕೆ, ಸಂತೋಷಗಳಿಂದ ಕಾರ್ಯಪ್ರವೃತ್ತವಾಗುವವು. ಮತ್ತು ಸೂರ್ಯೋದಯವಾದಾಗ ಜನರು "ಪು ಣ್ಯಾ ಹ ವಾ ಯಿ ತು"–ಎನ್ನುವರು. ಆ ಮೂಲಕ ಪುಣ್ಯಾಹದನಿಮಿತ್ತ ಶುಭಕರ್ಮಗಳಿಗೆ ವೈದಿಕರು ಅನುಮತಿಯನ್ನು ನೀಡಿ ಓಂ ಪುಣ್ಯಾಹಂ ; ಸ್ವಸ್ತಿ ಭವತು, ಕರ್ಮ ಋಧ್ಯತಾಂ– (ಈ ದಿನವು ಪವಿತ್ರವಾಗಿದೆ ; ಒಳ್ಳೆಯದಾಗಲಿ ; ಸತ್ಕರ್ಮಗಳು ಬೆಳೆಯಲಿ) ಎಂದೆಲ್ಲ ಹೇಳಿ ಆಶೀರ್ವದಿಸುವರು. ಇವೆಲ್ಲವೂ ಸೂರ್ಯನ ದರ್ಶನ ಮಾತ್ರದಿಂದ ಜನರಿಗೆ ದೊರೆಯುವವು. ಹೀಗೆ ಸೂರ್ಯನು ಕರ್ಮಪ್ರಚೋದಕನಾಗಿರುವನು. ಇನ್ನು ಸೂರ್ಯನೊಡನೆಯೇ ತೋರಿಕೊಳ್ಳುವ ಆತನ ರಥ, ಅದರ ಚಕ್ರ, ಕುದುರೆಯೂ ಸಹ ಪ್ರಪಂಚದ ದೈನಂದಿನವ್ಯಾಪಾರಕ್ಕೆ ಪ್ರಚೋ

ದಕಗಳಾಗಿರುವವು. ಹೇಗೆಂದರೆ ರಥವು ಪ್ರತಿಯೊಬ್ಬರ ಶರೀರವನ್ನೂ, ಚಕ್ರವು ಅವರವರ ಕರ್ಮಗಳನ್ನೂ ಕುದುರೆಯು ಇಂದ್ರಿಯ, ಬುದ್ಧಿ-ಗಳನ್ನೂ ಪ್ರತಿನಿಧಿಸುತ್ತವೆ. ಕರ್ಮಚಕ್ರವು ತಿರುಗುತ್ತಲೇ ಇರುವದೇ ಜಗದ್ವ್ಯಾಪಾರವು. ಸೂರ್ಯನು ತನ್ನ ಒಂದೇ ಚಕ್ರದ ರಥವನ್ನು ಜಾಣತನದಿಂದ ಅಪಾಯವಿಲ್ಲದಂತೆ ನಡೆಯಿಸುತ್ತಿರುವನು. ಏಳು ಕುದುರೆಗಳ ಕೆಲಸವನ್ನೂ ಒಂದೇ ಕುದುರೆಯೇ ಮಾಡುತ್ತಾ ಏಳು ಹೆಸರುಗಳನ್ನು ಹೊಂದಿರುವದು. ಹೀಗೆ ಸೂರ್ಯನು ತಾನು ಸವೆಯಿಸಬೇಕಾದ ದಾರಿಯನ್ನು ಮಹಾ ಸಾಹಸದಿಂದ ಕೇವಲ ಮಿತಪರಿವಾರ, ಸೌಕರ್ಯಗಳೊಡನೆ ಕ್ರಮಿಸುತ್ತಿರುವನು. ಇದರಿಂದ ತಿಳಿಯಬರುವದೇನೆಂದರೆ : ನಾವುಗಳು ಸಹ ನಮ್ಮ ಕ್ರಿಯಾಶಕ್ತಿಯಿಂದ ಯಾರ ಸಹಾಯವನ್ನೂ ಅತಿಯಾಗಿ ಅವಲಂಬಿಸದೆ ಒದಗಿದಷ್ಟನ್ನು ಬಳಸಿಕೊಂಡು ಸಿದ್ಧಿಯನ್ನು ಹೊಂದುವದರ ಕಡೆಗೆ ಸಾಗಬೇಕೇ ಹೊರತು ನಿಲ್ಲಬಾರದು-ಎಂದಾಗುತ್ತದೆ. ಸೂರ್ಯನೇ ನಮಗೆ ಈ ವಿಷಯದಲ್ಲಿ ಆದರ್ಶನಾಗಿರುವನು. ಮಹಾತ್ಮರ ಕ್ರಿಯಾಸಿದ್ಧಿಯು ಅವರ ಆತ್ಮಬಲದಲ್ಲಿ ಇದ್ದುಕೊಂಡಿರುವದೇ ಹೊರತು ಉಪಕರಣಸಾಮಗ್ರಿಗಳಲ್ಲಲ್ಲ-ಎಂದರ್ಥ. ಈಗಿನ ಕಾಲದಲ್ಲಾದರೊ, ಉಪಕರಣಗಳು ಸಮೃದ್ಧವಾಗಿವೆ. ಆದರೇನು ? ಅಂತಃಶ್ಶಕ್ತಿಯಾಗಲಿ, ತಪೋಯೋಗಾದಿರೂಪವಾದ ಸಾಧನಗಳಿಂದ ಕೂಡಿದ ಮನಸ್ಸಾಗಲಿ ಇಲ್ಲದೆ ಸಿದ್ಧಿಗಳು ಮರೆಯಾಗಿಬಿಟ್ಟಿರುವವು. ಲೌಕಿಕವಾದ ಕಾರ್ಯಸಿದ್ಧಿಗಳಿಗೇ ಕೊರತೆಯಾಗಿರುವಾಗ ದೈವಿಕಸಿದ್ಧಿಯು ಆತ್ಮಬಲವಿಲ್ಲದೆ ಹೇಗೆ ದೊರಕೀತು ? ಆದ್ದರಿಂದ ನಾವು ಸೂರ್ಯನನ್ನು ಆರಾಧನೆಮಾಡಿಯೇ ಸಿದ್ಧರಾಗಬೇಕಾಗಿದೆ.

ಈಗ ೫-೫-೫-೩ ನೆಯ ಮಂತ್ರವನ್ನು ವಿಚಾರಮಾಡೋಣ.

**ಓಂ ॥ ವಿಭ್ರಾಜಮಾನ ಉಷಸಾಮುಪಸ್ಥಾದ್ರೇಭೈರುದೇತ್ಯನು-**
**ಮದ್ಯಮಾನಃ । ಏಷ ಮೇ ದೇವಃ ಸವಿತಾ ಚಚ್ಛಂದ**
**ಯಃ ಸಮಾನಂ ನ ಪ್ರಮಿನಾತಿ ಧಾಮ ॥**

"ಈ ಸೂರ್ಯನು ವಿಶೇಷವಾಗಿ ಹೊಳೆಯುತ್ತಾ ಉಷಃಕಾಲಗಳ ನಡುವೆ ಸ್ತೋತ್ರಪಾಠಕರುಗಳಿಂದ ಹೊಗಳಲ್ಪಡುತ್ತಿರುವವನಾಗಿ ಉದಯಿಸುವನು. ಮತ್ತು ಯಾವ ಈ ದೇವನು ಎಲ್ಲಾ ಪ್ರಾಣಿಗಳಿಗೂ ತನ್ನ ತೇಜಸ್ಸನ್ನು ಸರಿಸಮಾನವಾಗಿ ಸಂಕೋಚವಿಲ್ಲದೆ ದಯಪಾಲಿಸುವನೋ, ಯಾರಿಗೂ (ನ ಪ್ರಮಿನಾತಿ) ಕಡಿಮೆ ಮಾಡದೆ ಕೊಡುತ್ತಿರುವನೋ ಅವನು ನನಗೆ ಕಾಮಗಳನ್ನುಂಟುಮಾಡುತ್ತಿರುವನು"-ಎಂದು ಸರಳಾರ್ಥವು.

ಈ ಮಂತ್ರದಲ್ಲಿ ಸೂರ್ಯನ ಉದಯವನ್ನು ಹೊಗಳಿದೆ. ಆತನು ಹುಟ್ಟುವ ಮುಂಚೆ ಸಂಭವಿಸುವ ಉಷಃಕಾಲವು ಪ್ರತಿದಿನವೂ ತಪ್ಪದೆ ಒದಗುತ್ತದೆ. ಉಷೆಯನ್ನು ಸ್ತ್ರೀಯೆಂದು ಭಾವಿಸಿ ಅನೇಕ ಉಷಾಮಣಿಗಳ ನಡುವೆ ವಿಶೇಷವಾಗಿ ಹೊಳೆಯುತ್ತಾ ಸೂರ್ಯನು ತೋರಿಕೊಳ್ಳುವನೆಂದು ತಿಳಿಸಿದೆ. ಮತ್ತು ಆ ಸಮ

ಯಕ್ಕೆ ಸೂರ್ಯರಥದಲ್ಲಿರುವ ಅಪ್ಸರೆಯರೂ ಗಂಧರ್ವರೂ ಸ್ತೋತ್ರಮಾಡಲಾರಂಭಿಸುವರು. ಹೀಗೆ ಉದಯಿಸುತ್ತಿರುವಾಗಲೇ, ಆತನು ಪಕ್ಷಪಾತವಿಲ್ಲದಂತೆ ಎಲ್ಲರಿಗೂ ಸರಿಸಮಾನವಾಗಿ ತನ್ನ ಬೆಳಕನ್ನು ನೀಡುತ್ತಿರುವನು. ಒಂದು ಅರಮನೆಯನ್ನೂ ಭವ್ಯವಾದ ದೇವಾಲಯವನ್ನೂ ಎಷ್ಟರಮಟ್ಟಿನ ಕಿರಣಗಳಿಂದ ಪ್ರಕಾಶಿಸುವನೋ ಹಾಗೆಯೇ ಒಂದು ಗುಡಿಸಲನ್ನೂ ಬಂದೀಖಾನೆಯನ್ನೂ ಬೆಳಗುವನು. ಅವನ ಕಿರಣಪ್ರಸಾರಕ್ಕೆ ತಾ ರ ತ ಮ್ಯ ಗ ಳಿ ಲ್ಲ. ಅಥವಾ ವಿದ್ಯುಚ್ಛಕ್ತಿಯನ್ನು ಮಾನವನು ಹತೋಟಿಗೆ ಒಳಪಡಿಸಿ ಹೈ ಮತ್ತು ಲೋ-ಟೆನ್‌ಷನ್‌ಗಳಲ್ಲಿ ಹಂಚುವಂತೆ ಸೂರ್ಯನನ್ನು ಹಂಚಲಾಗುವದಿಲ್ಲ. ಬಲ್ಬುಗಳ ವೋಲ್ಟೇಜಿಗನುಗುಣವಾಗಿ ವಿದ್ಯುಚ್ಛಕ್ತಿಯು ಬೆಳಗುವಂತೆ ಸೂರ್ಯನು ಆಯಾ ಜೀವರುಗಳ ಸ್ಥಿತಿಗತಿಗೆ ಅನುಗುಣವಾಗಿ ಮಂದ-ಮಧ್ಯಮ- ಉತ್ತಮದರ್ಜೆಯ ಪ್ರಕಾಶವನ್ನು ನೀಡುವದಿಲ್ಲ. ಎಲ್ಲರಿಗೂ ಒಂದೇ ರೀತಿಯ ಪ್ರಕಾಶವನ್ನೂ ಶಾಖವನ್ನೂ ನೀಡುತ್ತಿರುವ ಸೂರ್ಯನು ಸಮನೆನಿಸಿರುವನು. ಹೀಗೆ ಸರ್ವರಿಗೂ ಪ್ರಿಯನೂ ಪರಿಚಿತನೂ ಮಿತ್ರನೂ ಸಮಾನಭಾವದಿಂದ ವ್ಯವಹರಿಸುವವನೂ ಆದ ದೇವನು ನನ್ನ ಕಾಮಗಳನ್ನೂ ಪೂರೈಸುತ್ತಿರುವನು-ಎಂದು ಋಷಿಯು ಹೊಗಳಿರುತ್ತಾನೆ. ಒಮ್ಮೆ ಅಲೆಗ್ಸಾಂಡರ್ ಚಕ್ರವರ್ತಿಯು ತಾನು ಜಗಜ್ಜೇತನೆಂಬ ಅಹಂಕಾರದಿಂದ ಸಿಂಧೂ ನದಿಯ ದಡದಲ್ಲಿ ಸೂರ್ಯೋದಯಕಾಲಕ್ಕೆ ಕುಳಿತಿದ್ದ ಒಬ್ಬ ಋಷಿಯನ್ನು 'ನಿನಗೇನು ಬೇಕು ? ಕೇಳಿಕೊ, ಕೊಡುವೆನು'' ಎನ್ನಲು "ನಿನ್ನನ್ನೇ ನೀನು ಗೆದ್ದುಕೊಳ್ಳದಿರುವವನು ಜಗಜ್ಜೇತೃವಾಗಿ ಹೇಗಾದೀಯೆ? ನೀನೇನು ಕೊಟ್ಟೀಯೆ? ಈಗ ನನ್ನ ಮೇಲೆ ಹೊಂಗಿರಣಗಳನ್ನು ಬೀರಿ ಅನುಗ್ರಹಿಸುತ್ತಿರುವ ಸೂರ್ಯನಿಗೆ ಅಡ್ಡಲಾಗಿ ನೀನು ನಿಲ್ಲಬೇಡ ; ಅತ್ತ ಸರಿ '' ಎಂದುಬಿಟ್ಟನಂತೆ. ಆ ಋಷಿಗೆ ಸೂರ್ಯನೇ ಸರ್ವಕಾಮಪ್ರದನೆಂಬ ಪ್ರಜ್ಞೆಯು ಚೆನ್ನಾಗಿ ಮೂಡಿತ್ತು. ಹೀಗಿರುವಲ್ಲಿ ಆತನು ಅಲೆಕ್ಸಾಂಡರನಿಗೆ ಮಣಿದಾನೇನು ? ಇದೇ ಭಾರತೀಯಸಂಸ್ಕೃತಿಯ ವೈಶಿಷ್ಟ್ಯವು.

ಈಗ ೫-೫-೫-೪ನೆಯ ಮಂತ್ರವನ್ನು ವಿಚಾರಮಾಡೋಣ :

**ಓಂ ॥ ದಿವೋ ರುಕ್ಮ ಉರುಚಕ್ಷಾ ಉದೇತಿ ದೂರೇಽರ್ಥಸ್ತರಣಿ-**
**ರ್ಭ್ರಾಜಮಾನಃ । ನೂನಂ ಜನಾಃ ಸೂರ್ಯೇಣ ಪ್ರಸೂತಾ**
**ಅಯನ್ನರ್ಥಾನಿ ಕೃಣ್ವನ್ನಪಾಂಸಿ ॥**

"ಅಂತರಿಕ್ಷಕ್ಕೆ ಆಭರಣಪ್ರಾಯನಾದ ಹಾಗೂ ಹೆಚ್ಚಿನ ತೇಜಸ್ವಿಯಾದ ಸೂರ್ಯನು ದೂರದೇಶಗಳನ್ನೆಲ್ಲ ವ್ಯಾಪಿಸಿದವನಾಗಿ ಹೊಳೆಯುತ್ತಾ ಉದಯಿಸುತ್ತಿರುವನು. ಆಗ ಜನರೆಲ್ಲರೂ ಆ ಪ್ರೇರಕನಾದ ಸೂರ್ಯನಿಂದ ಅನುಜ್ಞಾತರಾಗಿ ತಾವು ಮಾಡಿ ಪಡೆಯಬೇಕಾಗಿರುವ ಫಲಗಳಿಗಾಗಿ ಕರ್ಮಗಳನ್ನು ಮಾಡುವರು'' ಎಂದಭಿಪ್ರಾಯ.

ಈ ಮಂತ್ರದಲ್ಲಿ ವಿಶೇಷಸ್ತುತಿಯೇನೂ ಕಂಡುಬರುವದಿಲ್ಲವಾದರೂ ಸೂರ್ಯನು ಅಂತರಿಕ್ಷಕ್ಕೆ ಒಡವೆಯಂತೆ ಇದ್ದಾನೆಂಬ ಸ್ತುತಿಯಿದೆ. 'ಹತ್ತು ಕಟ್ಟುವ ಕಡೆ ಒಂದು ಮುತ್ತು ಕಟ್ಟು" ಎಂದಂತೆ ಸೂರ್ಯನು ಅಂತರಿಕ್ಷದಲ್ಲಿರುವ ಜ್ಯೋತಿಗಳಿಗೆಲ್ಲಕ್ಕೂ ಆಭರಣಪ್ರಾಯನಾಗಿರುವನು. ಆತನ ಬೆಳಕಿನ ಪ್ರಭಾವದಿಂದ ಭೂಮಿಯಲ್ಲಿರುವ ಜನರಿಗೆ ಅಂತರಿಕ್ಷದಲ್ಲಿರುವ ಇನ್ನೂ ಎಷ್ಟೋ ಜ್ಯೋತಿರ್ಮಂಡಲಗಳು ಕಾಣುವದೇ ಇಲ್ಲ. ಅದಕ್ಕಾಗಿಯೇ ವಿಜ್ಞಾನಿಗಳು ಸೂರ್ಯಗ್ರಹಣಸಮಯವನ್ನು ಕಾದಿದ್ದು ಮಂಡಲವು ಪೂರ್ಣವಾಗಿ ಮುಚ್ಚಲ್ಪಟ್ಟಾಗ ಏನಾದರೂ ಹೊಸಬೆಳಕುಗಳು ಕಂಡೀತೋ-ಎಂದು ವೀಕ್ಷಿಸುವರು. ಆದರೆ ಫಲಿತಾಂಶವೇನೂ ಆಶಾದಾಯಕವಾಗಿರುವದಿಲ್ಲ. ಸೂರ್ಯನು ಬೆಳಗುತ್ತಿರುವವರೆಗೆ ಭೂಲೋಕದ ಜನರ ದೃಷ್ಟಿಯಿಂದ ಆತನನ್ನು ಮೀರಿಸುವ ಜ್ಯೋತಿಯು ಕಂಡುಬರಲಾರದು. ಹೀಗೆ ಸೂರ್ಯಭಗವಂತನು ಅಂತರಿಕ್ಷಾಭರಣನಾಗಿ ವಿರಾಜಮಾನನಾಗಿರುವನು.

ಇನ್ನು ಆತನು ಕರ್ಮಗಳಿಗೆ ಪ್ರೇರಕನೆಂಬುದನ್ನು ಈಗಾಗಲೆ ತಿಳಿಸಿದ್ದಾಗಿದೆ. ವಿಶೇಷವಾಗಿ ಫಲಾರ್ಥಿಗಳಾದವರು ಮಾಡುವ ಶಾಸ್ತ್ರೀಯಕರ್ಮಗಳನ್ನು ತೆಗೆದುಕೊಂಡರೆ ಫಲಪ್ರಾಪ್ತಿಗೂ ಕರ್ಮಾನುಷ್ಠಾನಕ್ಕೂ ಅಂತರವಿದ್ದೇ ಇರುವದರಿಂದ "ಇಂಥವನು ಇಂಥ ಕರ್ಮವನ್ನು ಮಾಡಿರುವದರಿಂದ ಇಂಥ ಫಲಕ್ಕೆ ಅರ್ಹನಾಗಿರುತ್ತಾನೆ'' ಎಂದು ದೃಢಪಡಿಸಲು ಸೂರ್ಯನೇ ಬೇಕು. ಆದ್ದರಿಂದಲೇ ಅವನನ್ನು "ಕರ್ಮಸಾಕ್ಷಿ''ಯೆಂದು ಕರೆಯುವರು. ಮತ್ತು ಕರ್ಮಗಳಿಗೆ ದೊರಕುವ ಫಲಗಳೆಂಬಿವು ಕೂಡ ಸೂರ್ಯನ ಪ್ರಸಾದವಾಗಿಯೇ ಇರುವವು. ಉದಾಹರಣೆಗೆ ಒಬ್ಬನು ಪುತ್ರಕಾಮೇಷ್ಟಿಯನ್ನು ಮಾಡಿ ಗಂಡುಮಗುವನ್ನು ಪಡೆದದ್ದೇ ಆದರೆ ಆತನ ಜೀವನ, ಪತ್ನಿಯ ಜೀವನ, ಹಾಗೂ ಆಕೆಯು ಗರ್ಭವತಿಯಾಗಿ ಸುಖಪ್ರಸವವನ್ನು ಪಡೆಯುವದು, ಅನಂತರ ಆ ಮಗುವಿನ ಆಯುರಾರೋಗ್ಯಾದಿಸಮಸ್ತ ಫಲಗಳಿಗೂ ಸೂರ್ಯನೇ ದಾತೃವಾಗಿರುವನಲ್ಲವೆ? ಹೀಗೆಯೇ ಲೌಕಿಕಕರ್ಮಗಳಿಗೂ ತಿಳಿಯಬೇಕು. ಒಬ್ಬ ಹೂದೋಟದವನು ಹಾಕಿರುವ ಗಿಡಗಳಲ್ಲಿ ಹೂವುಗಳು ಅರಳಲು ಸೂರ್ಯನೇ ಬೇಕು. ಹೀಗೆ ಪ್ರಾಣಿಗಳ ಸಮಸ್ತಕರ್ಮಗಳಿಗೂ ಫಲಗಳಿಗೂ ಮೂಲನಾದ ಆದಿತ್ಯನಿಗೆ ನಮಸ್ಕಾರ-ಎಂದಭಿಪ್ರಾಯ.

## ತಿದ್ದುಪಡಿ

'ಅಧ್ಯಾತ್ಮ ಪ್ರಕಾಶ' 1984ನೇ ನವೆಂಬರ್ ಸಂಚಿಕೆಯು "ದೇವೀಮಾಹಾತ್ಮ್ಯ" ಪುಟ ೨೨ರಲ್ಲಿರುವ ೭೪ನೆಯ ಪದ್ಯದ ಭಾವಾರ್ಥವನ್ನು ಹೀಗೆ ಓದಿಕೊಳ್ಳಿರಿ :-

"ಹಾಗೇ ಆಗಲೆಂದು ಶಂಖಚಕ್ರಗದಾಧಾರಿಯಾದ ಆ ಭಗವಂತನು (ತಾನು ನೀರಿನಮೇಲೆ ಕುಳಿತು) ಅವರಿಬ್ಬರ ತಲೆಗಳನ್ನೂ (ತಲೆಕೆಳಗಾಗಿ) ತನ್ನ ತೊಡೆಯ ಮೇಲಿರಿಸಿಕೊಂಡು ಚಕ್ರದಿಂದ ಕತ್ತರಿಸಿಬಿಟ್ಟನು". (ಇಲ್ಲಿ ಜಘನಶಬ್ದಕ್ಕೆ ವಿಷ್ಣುವಿನ ತೊಡೆಯೆಂದರ್ಥ).

# ಗ್ರಂಥಪರಿಚಯ

**೧. ವಾಸವೀವಿಜ್ಞಾನಸುಧ:** ( ತೆಲುಗು ) **೨. ಆರ್ಯವೈಶ್ಯ ಗೋತ್ರಪ್ರವರಾವಳಿ. ಬರೆದವರು : ಮತ್ತು ಪ್ರಕಾಶಕರು :** ಶ್ರೀ ಕೋಂಕಿ ಮಳ್ಳ ಚಂದ್ರಶೇಖರಗುಪ್ತ, ಅಡ್ವೋಕೇಟ್, ಮತ್ತು ನೋಟರಿ, ಸ್ತಂಭಾದ್ರಿ. (ಖಮ್ಮಮ್) ಪುಟಗಳು : ಕ್ರಮವಾಗಿ ಡೆಮ್ಮಿ ೨೯೨ ಮತ್ತು ೨೩೦.

ಈ ಎರಡು ಗ್ರಂಥಗಳನ್ನೂ ಪ್ರಕಾಶಕರು ಪರಿಚಯಕ್ಕಾಗಿ ಸಮರ್ಪಿಸಿದ್ದಾರೆ. ಮೊದಲನೆಯ ಗ್ರಂಥದಲ್ಲಿ ಶ್ರೀ ವಾಸವೀದೇವಿಯ ಉಪಾಸನಾಕ್ರಮ, ಪಂಚಾವರಣ ಪೂಜೆ, ಅಷ್ಟೋತ್ತರಸಹಸ್ರನಾಮಾವಳಿಗಳು, ಮಂಗಳಾಶಾಸನ– ಇತ್ಯಾದಿ ಅರ್ಚನೋಪಯೋಗಿಯಾದ ವಿಷಯಗಳಿವೆ. ಎಲ್ಲ ವಿಷಯಗಳೂ ಸಾಕಷ್ಟು ವಿವರವಾಗಿಯೇ ಇವೆ. ಆರ್ಯವೈಶ್ಯಮಹಾಜನರೆಲ್ಲರೂ ಈ ಪದ್ಧತಿಯಂತೆ ಪೂಜಾಜಪಾದಿಗಳನ್ನು ನಡೆಯಿಸಬೇಕಾದದ್ದು ಕರ್ತವ್ಯವಾದರೂ ಕಾಲಸಂಕೋಚದಿಂದ ಸಾಧ್ಯವಾಗಲಾರದು. ಆದ್ದರಿಂದ ಶ್ರೀಕನ್ಯಕಾಪರಮೇಶ್ವರಿಯ ದೇವಾಲಯಗಳಲ್ಲಿ ಈ ಪೂಜಾಪದ್ಧತಿಯನ್ನು ಜಾರಿಗೆ ತಂದಲ್ಲಿ ಅನುಕೂಲವಾದೀತು. ಈಗಲೂ ವೈಶ್ಯಜನಾಂಗದವರ ಆಡಳಿತದಲ್ಲೇ ಇರುವ ಅನೇಕ ದೇವಾಲಯಗಳಲ್ಲಿ ಮಂತ್ರಜ್ಞರಾದ ವಿದ್ಯಾವಂತರಾದ ಅರ್ಚಕರುಗಳೇ ಇರುತ್ತಾರಾದ್ದರಿಂದ ಈ ಗ್ರಂಥವು ಪ್ರತಿಯೊಂದು ದೇವಸ್ಥಾನದಲ್ಲಿಯೂ ಇದ್ದರೆ ಉಪಯೋಗವಾಗಲಿದೆ. ಹಾಗೆಯೇ ಗೋತ್ರಪ್ರವರಾವಳಿಯೂ ಅತ್ಯುಪಯುಕ್ತವಾದ ಗ್ರಂಥವಾಗಿದೆ. ವೈಶ್ಯಜನಾಂಗದವರಲ್ಲಿ ಮಾತ್ರ ಋಷಿಗೋತ್ರ– ಸಂಕೇತಗೋತ್ರ- ಎರಡೂ ಜಾರಿಯಲ್ಲಿವೆಯೆಂದೂ ವೈದಿಕಕರ್ಮಗಳಲ್ಲಿ ಋಷಿಗೋತ್ರವನ್ನೂ ವ್ಯವಹಾರಗಳಲ್ಲಿ ಸಂಕೇತಗೋತ್ರಗಳನ್ನೂ ಬಳಸಬೇಕೆಂದೂ ಇಲ್ಲಿ ತಿಳಿಸಿದ್ದಾರೆ. ಒಂದೇ ಗೋತ್ರಕ್ಕೆ ಎರಡು ಹೆಸರುಗಳು ಇರುತ್ತವೆಯೆಂಬುದನ್ನೂ ತಿಳಿಯಬೇಕು. ಇಂಥ ಶಾಸ್ತ್ರೀಯ ಗ್ರಂಥಗಳನ್ನು ಹೊರತಂದು ವರ್ಣಾಶ್ರಮಧರ್ಮಸೇವೆಯನ್ನು ಕೈಗೊಂಡಿರುವ ವಾಸವೀವಿಜ್ಞಾನಪೀಠದವರಿಗೆ ನಮ್ಮ ಶುಭಾಶಯಗಳು.

**೩. ದಕ್ಷಿಣಾಮೂರ್ತಿಸ್ತೋತ್ರಮು :** ( ತೆಲುಗು ) ಅನುವಾದಕರು ಹಾಗೂ ಪ್ರಕಾಶಕರು: ಶ್ರೀ ಜೆ.ವಿ. ಪೂರ್ಣಚಂದ್ರರಾವ್, ಪ್ರತಾಪಗಿರಿವಾರಿ ವೀಥಿ, ರೈಲು ಪೇಟ, ಗುಂಟೂರು. ಪುಟಗಳು : ಡೆಮ್ಮಿ 84. ಬೆಲೆ : ರೂ. ೫.

ಬ್ರಹ್ಮೀಭೂತ ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳು ಕನ್ನಡದಲ್ಲಿ ವಿವರಣೆಸಮೇತ ಬರೆದಿರುವ ದಕ್ಷಿಣಾಮೂರ್ತಿಸ್ತೋತ್ರವನ್ನು ಶ್ರೀ ಪೂರ್ಣಚಂದ್ರರಾವ್‌ರವರು ತೆಲುಗಿನಲ್ಲಿ ಅನುವಾದಮಾಡಿ ಪ್ರಕಟಿಸಿರುತ್ತಾರೆ. ಕನ್ನಡಭಾಷೆಯ ಪರಿಚಯವಿಲ್ಲದ ಹಾಗೂ ತೆಲುಗುಭಾಷಾಭಿಮಾನಿಗಳ ಉಪಯೋಗಕ್ಕೆ ಈ ಗ್ರಂಥವು ತಕ್ಕದ್ದಾಗಿದೆ. ದಕ್ಷಿಣಾಮೂರ್ತಿಸದ್ಗುರುವಿನ ಮಹಿಮೆಯ ನೆಪದಲ್ಲಿ ವೇದಾಂತಸಿದ್ಧಾಂತವನ್ನೆಲ್ಲ ಸಂಗ್ರಹವಾಗಿ ಈ ಗ್ರಂಥದಲ್ಲಿ ಅಳವಡಿಸಿದೆ. ಸಿದ್ಧಾಂತಪ್ರಧಾನವಾಗಿಯೇ ವಿವರಿಸಲ್ಪಟ್ಟಿರುವ ಈ ಗ್ರಂಥವು ಶಂಕರವೇದಾಂತ ಅಭಿಮಾನಿಗಳಿಗೆ ಅತ್ಯುಪಯುಕ್ತವಾಗಿದೆ. ನಮ್ಮ ಅಭಿನಂದನೆಗಳು.

**೪. ಶ್ರೀಶಂಕರಾಚಾರ್ಯರು ಮತ್ತು ಅವರ ಸಾಧನೆಗಳು :** ( ಒಂದು ಸೂಕ್ಷ್ಮ ಪರಿಚಯ ) ಲೇಖಕರು: ಶ್ರೀ ಅಡ್ಡಗದ್ದೆ ಕೃಷ್ಣಮೂರ್ತಿ,

ಬಿ.ಎ.ಬಿ.ಟಿ; ಪ್ರಕಾಶಕರು: ಅದ್ವೈತಸಂಘ, ಶಂಕರಮಠ, ಹಾಸನ. ಪುಟಗಳು: ಡೆಮ್ಮಿ ೨೪. ಬೆಲೆ: ಉಚಿತ.

ಈ ಪುಟ್ಟ ಪುಸ್ತಿಕೆಯಲ್ಲಿ ಮಾಧವೀಯ ಶಂಕರವಿಜಯಾನುಸಾರವಾದ ಕಥಾಭಾಗವಿದೆ. ಗುರುಭಕ್ತರಿಗೆ ಪ್ರಾರಂಭಿಕಪಠನಕ್ಕೆ ಯೋಗ್ಯವಾಗಿದೆ. ಶ್ರೀಶಂಕರರ ಸಾಧನೆಗಳನ್ನು ಮಾತ್ರ ಪವಾಡಗಳ ದೃಷ್ಟಿಯಿಂದ ಮಾತ್ರವಲ್ಲದೆ ಶೈಕ್ಷಣಿಕವಾಗಿಯೂ ಅಳೆದು ಜನರ ಮುಂದೆ ಇಡುವ ಪ್ರಯತ್ನವು ಈಗ ನಡೆಯಬೇಕು. ಏಕೆಂದರೆ ಆಚಾರ್ಯರ ಜೀವನಕಥೆಗಿಂತ ಉಪದೇಶಗಳಿಗೇ ಈಗಿನ ಜನರಲ್ಲಿ ಹೆಚ್ಚು ಬೇಡಿಕೆಯೂ ಒಲವೂ ಕಂಡುಬರುತ್ತಿದೆ. ಅದಕ್ಕೆ ತಕ್ಕಂತೆಯೇ ಅವರ ಭಾಷ್ಯಗ್ರಂಥಗಳಲ್ಲಿ ಮುಗಿಯಲಾರದಷ್ಟು ಅಸಾಧಾರಣೋಪದೇಶಗಳು ತುಂಬಿತುಳುಕುತ್ತಿವೆ. ಅವು ಈಗಿನ ಕಾಲಕ್ಕೂ ಅತ್ಯುಪಯುಕ್ತವಾಗಿವೆ. ಆಚಾರ್ಯರ ಉಪದೇಶಗಳ ಒಂದೊಂದೇ ಭಾಗವನ್ನು ಸರಳವಾಗಿ ಪುಟ್ಟಪುಸ್ತಕಗಳರೂಪದಿಂದ ಹೊರತರಲು ವೇದಾಂತವಿದ್ವಾಂಸರುಗಳು ಪ್ರಯತ್ನಿಸಬೇಕು. ಗ್ರಂಥಕರ್ತರಿಗೆ ನಮ್ಮ ಶುಭಾಶಯಗಳು.

**೫. ಭಾಮತೀ:** ಶ್ರೀಜಗದ್ಗುರು ಚಂದ್ರಶೇಖರಭಾರತೀ ಮೆಮೊರಿಯಲ್ ಕಾಲೇಜು, ಶೃಂಗೇರಿ– ಇವರ ಹದಿನೆಂಟನೆಯ ವಾರ್ಷಿಕ ಸಂಸ್ಮರಣ ಸಂಚಿಕೆ. ಪುಟಗಳು: ೧೧೪.

ಎಂದಿನಂತೆ ಸರ್ವಾಂಗಸುಂದರವಾಗಿ ಹೊರಬಂದಿರುವ ಈ ಸಂಚಿಕೆಯಲ್ಲಿ ಶಾಲಾವಿದ್ಯಾರ್ಥಿಗಳೇ ಬರೆದಿರುವ ಪುಟ್ಟಲೇಖನಗಳೂ ಕವಿತೆಗಳೂ ಇವೆ. ಆಯಾ ಲೇಖನಗಳು ಪೂರೈಸಿದ ಮೇಲೆ ಉಳಿದಿರುವ ಸ್ಥಳಗಳಲ್ಲಿ ಕೆಲವು ಸೂಕ್ತಿಗಳನ್ನೂ ಜೋಡಿಸಲಾಗಿವೆ. ಇಂಥ ಸೂಕ್ತಿಗಳನ್ನು ಬಹಳಮಟ್ಟಿಗೆ ಸಂಸ್ಕೃತಸಾಹಿತ್ಯಭಂಡಾರದಿಂದಲೇ ಆರಿಸಿಕೊಳ್ಳಲಾಗಿದೆ. ಕಾಲೇಜಿನ ವರದಿ, ಪರಿಚಯ, ಪುರೋಭಿವೃದ್ಧಿಯನ್ನು ವಿವರಿಸುವ ಲೇಖನವೂ ಅಂಕಿ, ಅಂಶಗಳೊಡನೆ ವಿವರವಾಗಿ ಹೊರಬಿದ್ದಿದೆ. ಇದರಿಂದ ಸಂಸ್ಥೆಯ ಆಡಳಿತ, ಪ್ರಗತಿಗಳು ಆರೋಗ್ಯಕರವಾದ ಹಾದಿಯಲ್ಲಿ ಹೆಜ್ಜೆಯಿಕ್ಕುತ್ತಿದೆಯೆಂಬುದು ತಿಳಿಯುವಂತಿದೆ. ವಿದ್ಯಾಭ್ಯಾಸಕ್ಕೆ ಖಾಸಗಿಕ್ಷೇತ್ರಗಳೇ ಹೆಚ್ಚು ಫಲವತ್ತಾಗಿರುವಂತೆ ಈ ಪ್ರಕಟನೆಯಿಂದ ಕಂಡುಬಂದಿದೆ. ಆದ್ದರಿಂದ ಇಂಥ ಶಿಕ್ಷಣ ಸಂಸ್ಥೆಗಳು ಇನ್ನೂ ವಿಶೇಷವಾಗಿ ಬೆಳೆಯಲೆಂದು ಹಾರೈಸುತ್ತೇವೆ.

**೬. ಚಿಕ್ಕಮಗಳೂರು ಜಿಲ್ಲಾ ಬರಹಗಾರರು:** ಬರೆದವರು: ರಾಜಭಾಷಾವಿದ್ವಾನ್, ಕಾಶಿವಿಶ್ವನಾಥಶೆಟ್ಟಿ, ಎಂ. ಎ; ಪ್ರಕಾಶಕರು: ಜಿಲ್ಲಾ ಕನ್ನಡಸಾಹಿತ್ಯಪರಿಷತ್ತು, ಚಿಕ್ಕಮಗಳೂರು. ಪುಟಗಳು: ಕ್ರೌನ್ ೯೦; ಬೆಲೆ: ೨ ರೂ.

ಈ ಗ್ರಂಥದಲ್ಲಿ ಪುಟ ೯ ರಲ್ಲಿ ಪರಿಚಯಮಾಡಿಕೊಂಡಿರುವ ಶ್ರೀ ಕಾಶಿವಿಶ್ವನಾಥಶೆಟ್ಟರವರೇ ಗ್ರಂಥಲೇಖಕರಾಗಿದ್ದಾರೆ. ಜಿಲ್ಲೆಯ ಅನೇಕ ಬರಹಗಾರರ ಕಿರುಪರಿಚಯವೂ ಸಾಹಿತ್ಯ ಸೃಷ್ಟಿಯಕಾರ್ಯದ ವಿವರವೂ ಇಲ್ಲಿ ದೊರಕುತ್ತದೆ. ಇದೊಂದು ಉತ್ತಮ ಕೈಪಿಡಿಯೆಂಬುದರಲ್ಲಿ ಸಂಶಯವಿಲ್ಲ.

---

# ಶಾಸ್ತ್ರಪ್ರಮಾಣ್ಯ

(ಸಂಪಾದಕರು ಈಚೆಗೆ ತಿಪಟೂರಿನಲ್ಲಿ ಮಾಡಿದ ಉಪನ್ಯಾಸದ ಸಾರಾಂಶ)

ವೇದಾಂತಶಾಸ್ತ್ರದಲ್ಲಿ ಪರಬ್ರಹ್ಮವೊಂದೇ ಪರಮಾರ್ಥಸತ್ಯವೆಂದು ತಿಳಿಸಿರುವದನ್ನು ಕೇಳಿದ ಕೆಲವರು 'ಬ್ರಹ್ಮವೊಂದೇ ಸತ್ಯವಾದರೆ, ಬ್ರಹ್ಮವನ್ನು ಹಾಗೆಂತ ತಿಳಿಸಿದ ಶಾಸ್ತ್ರದ ಗತಿಯೇನು? ಅದೂ ಮಿಥ್ಯೆಯಾದರೆ ಮಿಥ್ಯಾಶಾಸ್ತ್ರದಿಂದುಂಟಾದ ಅರಿವೂ ಮಿಥ್ಯೆಯಾಗಿಬಿಡುವದರಿಂದ 'ಬ್ರಹ್ಮವೊಂದೇ ಪರಮಾರ್ಥ'ವೆಂಬ ಸಿದ್ಧಾಂತವು ಬಾಧಿತವಾಗಿಬಿಡುವದಿಲ್ಲವೆ? ಇದು ಹೇಗೆ ಸರಿ? ಆದ್ದರಿಂದ ಶಾಸ್ತಾ, ಶಾಸ್ತ್ರ, ಶಿಷ್ಯ-ಎಂಬಿಷ್ಟು ದ್ವೈತವನ್ನಾದರೂ ಅದ್ವೈತಿಗಳು ಒಪ್ಪಿಕೊಳ್ಳಬೇಕು. ಇಲ್ಲವಾದರೆ ಪ್ರಮಾಣವಿರೋಧ, ಸ್ವಪಕ್ಷಹಾನಿಗಳು ಸಂಭವಿಸುವವು'-ಎಂದು ಪ್ರಶ್ನಿಸುತ್ತಿರುವರು. ಸಾಮಾನ್ಯರ ದೃಷ್ಟಿಯಿಂದ ಈ ಆಕ್ಷೇಪವು ಬರತಕ್ಕದ್ದೇ ಸರಿ. ಆದರೆ ಶಾಸ್ತ್ರಪ್ರಾಮಾಣ್ಯವನ್ನು ಕಾಪಾಡಿಕೊಳ್ಳುವದಕ್ಕಾಗಿಯೇ ದ್ವೈತವನ್ನು ಒಪ್ಪಿಕೊಳ್ಳಬೇಕೆ? ಅಥವಾ ಮಿಥ್ಯಾಶಾಸ್ತ್ರವ್ಯವಹಾರದಿಂದಲೂ ಸತ್ಯಬ್ರಹ್ಮದ ಸಿದ್ಧಿಯಾಗಬಹುದೆ? ಎಂಬುದನ್ನೀಗ ವಿಚಾರಿಸಬೇಕಾಗಿದೆ. ಇದರಿಂದ ಅದ್ವೈತಿಗಳು ಶಾಸ್ತ್ರಪ್ರಾಮಾಣ್ಯವನ್ನು ಹೇಗೆ ಸ್ಥಾಪಿಸುತ್ತಾರೆಂಬುದೂ ತಿಳಿದುಬರಲಿದೆ.

ಅದ್ವೈತಸಿದ್ಧಿಗಾಗಿಯೇ ವೇದಾಂತಿಗಳು ಹಟಮಾಡುವದಿಲ್ಲ. ಆದರೆ ಅದ್ವೈತವೇ ನಿಜವಾಗಿಬಿಟ್ಟಿದ್ದರೆ ಯಾರೂ ಅಳಿಸಿಹಾಕಲಾಗುವದಿಲ್ಲ. ಇದನ್ನೇ ಶ್ರೀಶಂಕರರು "ಕಂಡದ್ದರ ವಿಷಯದಲ್ಲಿ ಅನುಪಪತ್ತಿಯೆಂತ ತರ್ಕಮಾಡಬಾರದು"-ಎಂದು ತಿಳಿಸಿರುತ್ತಾರೆ. ಇಲ್ಲಿ ಕಾಣುವದೆಂದರೆ ಅನುಭವಗೋಚರವಾಗಿರುವದೆಂದೇ ಅರ್ಥ. ಅನುಭವವನ್ನು ಯಾವ ವಾದಿಯೂ ಅಲ್ಲಗಳೆಯಲಾರನು. ಹಾಗೆ ಮಾಡಿದರೆ ಅವನ ಮಾತೇ ಪ್ರಮಾಣವಲ್ಲವೆಂದಾಗಿಬಿಡುವದು. ಆದ್ದರಿಂದ ಅನುಭವಾನುಗುಣವಾಗಿ ಶಾಸ್ತ್ರಪ್ರಾಮಾಣ್ಯವನ್ನು ಹೊಂದಿಸಬೇಕೇ ಹೊರತು ಶಾಸ್ತ್ರವಾಕ್ಯಕ್ಕನುಗುಣವಾಗಿ ತರ್ಕಬಲದಿಂದ ಅನುಭವವನ್ನು ತಿದ್ದಲಾಗುವದಿಲ್ಲ. ಶಾಸ್ತ್ರವಾದರೂ ಅನುಭವವನ್ನು ಬಿಟ್ಟೇನೂ ಹೇಳುವದಿಲ್ಲ. ಹೀಗಿದ್ದರೂ ವಾದಿಗಳಲ್ಲಿ ವಿಪ್ರತಿಪತ್ತಿಗೆ ಕಾರಣವೇನೆಂದರೆ: ಪ್ರತಿಯೊಬ್ಬ ವಾದಿಯೂ ತನ್ನ ತನ್ನ ಸ್ವಪಕ್ಷರಕ್ಷಣೆಗಾಗಿ ತನಗೆ ಅರಿವಿಲ್ಲದಂತೆಯೇ ತರ್ಕವನ್ನು ಪ್ರಮಾಣವೆಂದು ನಂಬಿ ಅನುಭವವನ್ನು ಕೈಬಿಟ್ಟಿರುತ್ತಾನೆ. ಅದರಿಂದಲೇ ಭಿನ್ನಾಭಿಪ್ರಾಯಗಳು ಉಂಟಾಗಿರುತ್ತವೆ. ವೇದಾಂತದಲ್ಲಿಯಾದರೋ ಸರ್ವವಾದಿಗಳ ಪಕ್ಷಗಳಿಗೂ ತರ್ಕಗಳಿಗೂ ಯಾವದು ಮೂಲವಾಗಿದೆಯೋ ಅದನ್ನೇ ಗುರುತಿಸುವದರ ಮೂಲಕ ಎಲ್ಲಾ ವಾದಿಗಳನ್ನೂ ಎಚ್ಚರಿಸಿ ಯಾರೊಬ್ಬರೂ **ಕಂಡದ್ದಕ್ಕೆ ವಿರುದ್ಧವಾಗಿ ತರ್ಕಮಾಡಬಾರದೆಂತ ಕಡಿವಾಣವನ್ನು ಹಾಕಲಾಗಿದೆ.** ಈ ಕಡಿವಾಣವು ವೇದಾಂತಿಗಳಿಗೂ ಅನ್ವಯಿಸುತ್ತದೆಯಾದ್ದರಿಂದ ಅನುಭವವನ್ನು ಬಿಟ್ಟು ಅವರಂತೂ ಕದಲುವದೇ ಇಲ್ಲ. ಆಗ ಶಾಸ್ತ್ರಪ್ರಾಮಾಣ್ಯವನ್ನು ಹೇಗೆ ವ್ಯವಹಾರದಲ್ಲಿ

ಸಾಧಿಸಬೇಕೆಂಬುದು ಮಾತ್ರ ವೇದಾಂತಿಗಳ ಪಾಲಿಗೆ ಜವಾಬ್ದಾರಿಯಾಗಿ ಉಳಿಯುತ್ತದೆ. ಅದರ ವಿವರವನ್ನು ಈಗ ತಿಳಿಯೋಣ.

ವ್ಯವಹಾರಪ್ರಪಂಚದಲ್ಲಿ ಶಾಸ್ತ್ರಕ್ಕೆ ಪರಮಪ್ರಾಮಾಣ್ಯವೂ ಗೌರವವೂ ಇರುತ್ತದೆ. ಅದರಲ್ಲಿಯೂ ಶಾಸ್ತ್ರವೆಂದರೆ ವೇದವೆಂದೇ ಶ್ರೀಶಂಕರರೂ ಅಭಿಪ್ರಾಯಪಟ್ಟಿರುತ್ತಾರೆ. ವೇದಾನುಸಾರಿಯಾದ ಸ್ಮೃತಿಪುರಾಣಗಳೂ ಶಾಸ್ತ್ರಶಬ್ದಕ್ಕೆ ಅರ್ಹವಾಗಿವೆ. ಆದ್ದರಿಂದ ವೈದಿಕರಾದ ಬ್ರಹ್ಮವಾದಿಗಳು ಶಾಸ್ತ್ರಕ್ಕೆ ಅನುಗುಣವಾಗಿಯೇ ಬ್ರಹ್ಮತತ್ತ್ವಪ್ರತಿಪಾದನೆಯನ್ನೂ ಮೋಕ್ಷಫಲವನ್ನೂ ವಿವರಿಸಿದ್ದಾರೆ. ಕರ್ಮಸಿದ್ಧಾಂತವಂತೂ ಸಂಪೂರ್ಣವಾಗಿ ಶಾಸ್ತ್ರಾಧೀನವಾಗಿಯೇ ಇರುತ್ತದೆ. ವೇದಾಂತಿಗಳೆಲ್ಲರೂ ಕರ್ಮೋಪಾಸನೆಗಳನ್ನೂ ಜ್ಞಾನವನ್ನೂ ಬ್ರಹ್ಮಪ್ರಾಪ್ತಿಗೆ ಸಾಧನವಾಗಿ ಒಪ್ಪಿರುತ್ತಾರೆ. ಇವರಲ್ಲಿ ಅದ್ವೈತಿಗಳೂ ಸೇರಿಯೇ ಇದ್ದಾರೆ. ಆದರೆ ಅದ್ವೈತಿಗಳ ಪ್ರತಿಪಾದನೆಯು ಹೇಗೆಂದರೆ: ಯಾವ ಶಾಸ್ತ್ರವು ಬ್ರಹ್ಮಸ್ವರೂಪವನ್ನು ಕುರಿತು ವರ್ಣಿಸುವಾಗ ನೇತಿ, ನೇತಿ- ಎಂದು ಹೇಳುತ್ತಿದೆಯೋ ಆ ನಿರವಕಾಶವಾದ ವೇದವಾಕ್ಯವನ್ನು ಅನುಸರಿಸಿ ಬ್ರಹ್ಮಜ್ಞಾನವನ್ನು ಪಡೆದುಕೊಂಡದ್ದೇ ಆದರೆ, ಅಂಥ ತಿಳಿದವನ ದೃಷ್ಟಿಯಲ್ಲಿ ಶಾಸ್ತ್ರವು ಬಾಧಿತವಾದರೆ ತಪ್ಪೇನು? ಯಾವನು ಇನ್ನೂ ದ್ವೈತವ್ಯವಹಾರದಲ್ಲೇ ಇದ್ದುಕೊಂಡು ಕ್ರಿಯಾಕಾರಕಫಲಗಳನ್ನು ಸತ್ಯವೆಂದೇ ನಂಬಿ ವಿಚಾರಮಾಡುತ್ತಿರುವನೋ ಅಂಥವನಿಗೆ ಶಾಸ್ತ್ರವು ಪ್ರಮಾಣವಾಗಿದ್ದುಕೊಳ್ಳಲಿ. ಶಾಸ್ತ್ರದಿಂದ ಬ್ರಹ್ಮಜ್ಞಾನವು ಲಭಿಸಿದಮೇಲೆ ವ್ಯವಹಾರಪ್ರಪಂಚದ ದ್ವೈತವಾಗಲಿ ಶಾಸ್ತ್ರವಾಗಲಿ ಪ್ರಮಾಣವಾಗಿಯೇ ಏಕಿರಬೇಕು? ಹಾಗೆ ಇರಬೇಕೆಂದೇ ವಾದಿಸುವದಾದರೆ ನೇತಿ ನೇತಿ ಎಂಬ ಶಾಸ್ತ್ರವಾಕ್ಯದ ತಾತ್ಪರ್ಯವು ತಪ್ಪಾಗುವದಿಲ್ಲವೆ? ಎಂದು ಅನುಭವಾನುಸಾರಿಯಾಗಿ ತರ್ಕಮಾಡಿ ನಿಜವನ್ನು ಹೊರಪಡಿಸಿರುತ್ತಾರೆ. ಇದರಿಂದ ಅದ್ವೈತಿಗಳು ಶಾಸ್ತ್ರಕ್ಕಿಂತಲೂ ಬ್ರಹ್ಮಾನುಭವಕ್ಕೇ ಹೆಚ್ಚು ಪ್ರಾಧಾನ್ಯವನ್ನು ನೀಡಿದ್ದಾರೆಂದಾಯಿತು. ಹೇಗೆಂದರೆ ಬ್ರಹ್ಮವನ್ನು ಸರಿಯಾಗಿ ತಿಳಿಯಿಸಿಕೊಡುವ ಅದರ ಕೆಲಸವು ಪೂರೈಸಿದ ಅನಂತರ ಶಾಸ್ತ್ರಕ್ಕೆ ಇನ್ನೇನೂ ಕೆಲಸವೇ ಇರುವದಿಲ್ಲ. ಈ ಕಾರಣದಿಂದ ಶಾಸ್ತ್ರವನ್ನು ಅಂತ್ಯಪ್ರಮಾಣವೆಂದೂ ವೇದಾಂತಿಗಳು ಕರೆದಿರುತ್ತಾರೆ. 'ತಿಳಿದಮೇಲೆ ದ್ವೈತವಿರುವದಿಲ್ಲ'-ಎಂದು ಶ್ರೀಗೌಡಪಾದರ ವಚನವೂ ಇದೆ.

ಹಾಗಾದರೆ ಶಾಸ್ತ್ರವು ಪ್ರತ್ಯಕ್ಷಾದಿಪ್ರಮಾಣಗಳಿಗೆ ವಿರೋಧವಾಗಿಬಿಡುವದರಿಂದ ಶಾಸ್ತ್ರವೇ ಏಕೆ ಅಪ್ರಮಾಣವೆಂದಾಗಬಾರದು? ಪ್ರತ್ಯಕ್ಷಾದಿಗಳು ದ್ವೈತವಿಷಯಕಗಳಾಗಿವೆ. ಶಾಸ್ತ್ರವು ಅದ್ವೈತವಿಷಯಕವಾಗಿದೆ. ಆದ್ದರಿಂದ ಬಹುಜನರು ಪ್ರಮಾಣವೆಂದೊಪ್ಪಿರುವ ಪ್ರತ್ಯಕ್ಷಾದಿಗಳನ್ನೇ ಇಟ್ಟುಕೊಂಡು ಶಾಸ್ತ್ರವನ್ನೇ ತ್ಯಜಿಬಿಡುವದು ಮೇಲಲ್ಲವೆ? ಎಂದು ಕೇಳಬಹುದು. ಇದಕ್ಕೆ ಶ್ರೀಶಂಕರರ ಉತ್ತರವೇನೆಂದರೆ: 'ಹಾಗಿಲ್ಲ; ಪ್ರತ್ಯಕ್ಷಾದಿಗಳಿಗೂ ಶಾಸ್ತ್ರಕ್ಕೂ ವಿರೋಧವೇ ಇಲ್ಲ. ಏಕೆಂದರೆ ಪ್ರತಿಯೊಂದು ಪ್ರಮಾಣವೂ ತನ್ನ ತನ್ನ ವಿಷಯವನ್ನು ತಿಳಿಸುವದರಲ್ಲಿ

ಸಮರ್ಥವಾಗಿದೆ-ಎಂಬ ನ್ಯಾಯವಿದೆ. ಅದರಂತೆ ಪ್ರತ್ಯಕ್ಷವು ದ್ವೈತವನ್ನೂ ಶಾಸ್ತ್ರವು ಅದ್ವೈತವನ್ನೂ ಪ್ರತಿಪಾದಿಸಿದರೆ ವಿರೋಧವೇಕೆ ಆಗಬೇಕು? ಕೆಲವು ವೇಳೆ ಶಾಸ್ತ್ರವೂ ದ್ವೈತದೃಷ್ಟಿಯನ್ನವಲಂಬಿಸಿ ಸ್ವರ್ಗಾದಿಫಲಗಳನ್ನೂ ಅವಕ್ಕೆ ಸಾಧನವಾದ ಯಜ್ಞಾದಿಗಳನ್ನೂ ಬೋಧಿಸಿರುವದು ನಿಜ. ಆ ವಿಷಯಕ್ಕೆ ಅದು ಪ್ರಮಾಣವೂ ಆಗಿದ್ದುಕೊಂಡಿರಲಿ. ಆದರೆ ಶಾಸ್ತ್ರವು ಅಪೂರ್ವವಾದ, ಪ್ರತ್ಯಕ್ಷಾದಿ ಪ್ರಮಾಣಾನಧಿಗತವಾದ ಏಕಮೇವಾದ್ವಿತೀಯವಾದ ಬ್ರಹ್ಮವನ್ನು ಕುರಿತು ಬೋಧಿಸಿದಾಗ ಪ್ರತ್ಯಕ್ಷಾದಿಗಳಿಗೇಕೆ ವಿರೋಧವಾದೀತು? ಪ್ರತ್ಯಕ್ಷಾದಿಗಳೇನೂ ಬ್ರಹ್ಮವಸ್ತುವಿನಲ್ಲಿ ವ್ಯಾಪಾರಮಾಡುವದಿಲ್ಲವಲ್ಲ? ಎಂದು ತಿಳಿಸಿದ್ದಾರೆ. ಆದ್ದರಿಂದ ಶಾಸ್ತ್ರವು ಅತೀಂದ್ರಿಯವೂ ವಾಙ್ಮನಸ್ಸುಗಳಿಗೆ ಆಗೋಚರವೂ ನಿರ್ವಿಶೇಷವೂ ಅಪ್ರಮೇಯವೂ ಆದ ಅದ್ವಿತೀಯವಸ್ತುವನ್ನು ಒಂದಾನೊಂದು ವಿಲಕ್ಷಣರೀತಿಯಿಂದ ಬೋಧಿಸಿ ಕಡೆಯಲ್ಲಿ ತಾನೂ ಅಪ್ರಮಾಣವಾಗಿಬಿಡುವದು. ಇದನ್ನೇ 'ಅಧ್ಯಾರೋಪಾಪವಾದನ್ಯಾಯ'ವೆನ್ನುವರು.

ಈಗ ಶಾಸ್ತ್ರವು ನಿರ್ವಿಶೇಷವಸ್ತುವಿನಲ್ಲಿ ಹೇಗೆ ವ್ಯಾಪಾರಮಾಡುತ್ತದೆ? ಎಂಬದನ್ನು ತಿಳಿಯೋಣ. ಈ ವಿಷಯದಲ್ಲಿ ಶ್ರೀಗೌಡಪಾದರು ತಿಳಿಸುವದೇನೆಂದರೆ: "ಸ್ವತಃ ಸಿದ್ಧವಾಗಿರುವ ಬ್ರಹ್ಮವನ್ನು ತಿಳಿಸುವದು ತಾನೆ ಏನಿದೆ? ಆದರೆ ಬ್ರಹ್ಮದಲ್ಲಿ ಅಧ್ಯಾರೋಪಿತವಾಗಿರುವ ಅನಾತ್ಮಧರ್ಮಗಳನ್ನು ಮಾತ್ರ ಅಲ್ಲಗಳೆಯಲೇಬೇಕಾಗಿರುತ್ತದೆ. ಅದಕ್ಕಾಗಿಯೇ ಶ್ರುತಿಯೇ 'ನೇತಿ, ನೇತಿ' ಎಂದು ಉಪದೇಶಿಸುತ್ತಿದೆ. ಆತ್ಮನು ಅಗ್ರಾಹ್ಯನೆಂದೇ ಇದರಿಂದ ಸಿದ್ಧವಾಗುತ್ತದೆ. ಏಕೆಂದರೆ ಗ್ರಾಹ್ಯವಾದದ್ದೆಲ್ಲವೂ ಹುಟ್ಟಿರಲೇಬೇಕು. ಬ್ರಹ್ಮವಾದರೋ ಹುಟ್ಟಿಲ್ಲದ್ದು. ಅದನ್ನು ಹೇಗೆ ತಾನೆ ಗ್ರಾಹ್ಯವಾಗಿ ಮಾಡಿಕೊಳ್ಳಲಾದೀತು? ಆದ್ದರಿಂದ ಶ್ರುತಿಯು ಅಜಾದ್ವಿತೀಯವೂ ಅದೃಶ್ಯವೂ ಜನಿಮದ್ಬುದ್ಧಿಗೋಚರವಲ್ಲದ್ದೂ ಆದ ಬ್ರಹ್ಮವನ್ನು ಅಬ್ರಹ್ಮತ್ವಾಧ್ಯಾರೋಪಗಳಿಂದ ಬಿಡುಗಡೆಮಾಡಿಸುವದಕ್ಕಾಗಿ ನೇತಿ ನೇತಿ– ಎಂದು ಹೇಳುತ್ತಿದೆ. ಹೀಗಿದ್ದರೂ ಜನರಿಗೆ ತತ್ತ್ವವು ಸರಿಯಾಗಿ ತಿಳಿಯುತ್ತಿಲ್ಲ. ಏಕೆಂದರೆ ಬ್ರಹ್ಮವು ಉಪೇಯವೆಂದೂ ಉಪಾಯದಿಂದ ಅದನ್ನು ಪಡೆದುಕೊಳ್ಳತಕ್ಕದ್ದಿದೆಯೆಂದೂ ಭಾವನೆಯಿರುತ್ತದೆ. ಆದ್ದರಿಂದಲೇ ಬ್ರಹ್ಮಜಿಜ್ಞಾಸುವು ಶಾಸ್ತ್ರ, ಗುರು –ಮುಂತಾದ ಉಪಾಯಗಳನ್ನಾಶ್ರಯಿಸಿರುತ್ತಾನೆ. ನಿಜವೇನೆಂದರೆ: ಉಪಾಯಗಳನ್ನು ಬಳಸಿ ಉಪೇಯಗಳನ್ನು ಲೋಕದಲ್ಲಿ ಪಡೆಯುವಂತೆ ಬ್ರಹ್ಮವನ್ನು ಪಡೆಯಲಾಗುವದಿಲ್ಲ. ಏಕೆಂದರೆ ಬ್ರಹ್ಮವು ಉಪೇಯವಲ್ಲ. ಮತ್ತು ಉಪಾಯಗಳನ್ನು ಬಳಸುವವನ ಸ್ವಸ್ವರೂಪಕ್ಕಿಂತ ಬೇರೆಯೂ ಅಲ್ಲ. ಇದು ಜಿಜ್ಞಾಸುವಿಗೆ ತಿಳಿಯದೆ ಇದೆ. ಈ ಭ್ರಾಂತಿಯನ್ನು ಕಳೆಯುವದಕ್ಕಾಗಿಯೇ 'ಬ್ರಹ್ಮವು ಉಪಾಯವೂ ಅಲ್ಲ; ಉಪೇಯವೂ ಅಲ್ಲ'– ಎಂದೇ ಶಾಸ್ತ್ರವು ಸಾರುತ್ತದೆ. ಕಟ್ಟಕಡೆಗೆ ಜಿಜ್ಞಾಸುವು ತನ್ನ ಬಾಹ್ಯಪ್ರಯತ್ನಗಳನ್ನೆಲ್ಲ ಕೈಬಿಟ್ಟು ಉಪಾಯೋಪೇಯಗಳೆಂಬ

ದ್ವೈತಗಳಿಂದ ಬಿಡುಗಡೆ ಹೊಂದಿ ಸುಮ್ಮನಾದನೆಂದರೆ ಆತ್ಮತತ್ತ್ವವು ತಾನಾಗಿಯೇ ಬೆಳಗುತ್ತದೆ; ಇದೇ ಶಾಸ್ತ್ರವ್ಯಾಪಾರವು' ಎಂದು ಗೌಡಪಾದರು ತಿಳಿಸಿದ್ದಾರೆ.

ಈಗ ಇನ್ನೊಂದು ವಿಚಾರವನ್ನು ಮಾಡತಕ್ಕದ್ದಿದೆ. ಬ್ರಹ್ಮವೇನೋ ಉಪಾಯೋಪೇಯಗಳಲ್ಲವೆಂದೇ ಒಪ್ಪೋಣ. ಶಾಸ್ತ್ರವೂ ಅಧ್ಯಾರೋಪಗಳ ನಿವರ್ತನೆಗೇ ತೊಡಗಲಿ. ಆದರೆ ಶಾಸ್ತ್ರವಾಕ್ಯಗಳನ್ನು ಗುರುವು ಬೋಧಿಸುವದು, ಶಿಷ್ಯನು ಕೇಳಿಸಿಕೊಳ್ಳುವದು-ಎಲ್ಲವೂ ದ್ವೈತವ್ಯವಹಾರದಲ್ಲೇ ಆಗಬೇಕಾಗಿರುವದರಿಂದ ಶಾಸ್ತ್ರಬೋಧವು ಅಸತ್ಯವೆಂದೇ ಆಗುವದು; ಹೀಗೆ ಅಸತ್ಯವಾಗಿರುವ ವೇದವಾಕ್ಯವು ಸತ್ಯವಾದ ಬ್ರಹ್ಮವನ್ನು ತಿಳಿಸಿಕೊಡಲು ಹೇಗೆ ಸಾಧ್ಯ? ಎಂಬುದೊಂದು ಆಕ್ಷೇಪವು. ಇದಕ್ಕೆ ಶ್ರೀಶಂಕರಾಚಾರ್ಯರು ಉತ್ತರಿಸುವದೇನೆಂದರೆ: 'ವಾಕ್ಯವು ಅಸತ್ಯವಾದರೇನು? ಬ್ರಹ್ಮಬೋಧವು ಆಗಬಹುದು. ಏಕೆಂದರೆ ಶಂಕಾವಿಷದಿಂದಲೂ ಅಂಜುಬುರುಕನು ಸಾಯುವದು ಕಂಡುಬಂದಿದೆ. ಯಾವನಾದರೊಬ್ಬನಿಗೆ ಹಾವುಕಡಿದಿದೆ-ಎಂದರೆ ಸಾಕು; ವಿಷವೇರದೆ ಇದ್ದರೂ ಆ ಭಯದಿಂದಲೇ ಅವನು ಸಾಯುವದುಂಟು. ಇಲ್ಲಿ ಇಲ್ಲದ ವಿಷವು ನಿಜವಾದ ಸಾವಿಗೆ ಕಾರಣವಾಗಲಿಲ್ಲವೆ? ಹಾಗೆಯೇ ಒಳ್ಳೆಯದಾಗುವದಕ್ಕೂ ಮಿಥ್ಯಾವಸ್ತುವೂ ನೆಪವಾಗಬಹುದು'-ಎಂದಿರುತ್ತಾರೆ. ಶ್ರೀಸುರೇಶ್ವರರು ತಿಳಿಸುವದೇನೆಂದರೆ: ಮಲಗಿ ನಿದ್ರೆಮಾಡುತ್ತಿರುವವನು ಯಾವನಾದರೂ ಕೂಗಿದರೆ ಎದ್ದು ಬಾಗಿಲು ತೆಗೆಯುವದು ಅನುಭವಸಿದ್ಧವಾಗಿದೆ. ಇಲ್ಲಿ ಕರೆದವನು ಎಚ್ಚರದವಸ್ಥೆಗೆ ಸೇರಿದ್ದನು. ಬಾಗಿಲು ತೆಗೆದವನು ಆಗ್ಗೆ ಕರೆದಾಗ ಸ್ವಪ್ನಾವಸ್ಥೆಯಲ್ಲಿದ್ದನು. ಆದರೂ ಅವನು ಏಳುವದಕ್ಕೆ ಕರೆದದ್ದು ಹೇಗೆ ಕಾರಣವಾಯಿತೋ ಹಾಗೆಯೇ ಅನಾದಿಮಾಯಾನಿದ್ರೆಯಲ್ಲಿ ಮಲಗಿರುವ ಜೀವನನ್ನು 'ತತ್ತ್ವಮಸಿ' ಎಂದು ಶಾಸ್ತ್ರವು ಕೂಗಿ ಹೇಳಿದಾಗ ಎಚ್ಚತ್ತುಕೊಳ್ಳಲು ಸಾಧ್ಯವಿದೆ. ಎಚ್ಚತ್ತಮೇಲೆ ಅವನಿಗೆ ಎಲ್ಲವೂ ತಾನೂ ಬ್ರಹ್ಮವೇ ಎಂಬ ಅನುಭವವಾಗಿ ಶಾಸ್ತ್ರ-ಗುರು-ಶಿಷ್ಯರೆಂಬ ದ್ವೈತವೂ ಬಾಧಿತವಾಗಿಬಿಡಬಹುದು. ಇಷ್ಟುಮಾತ್ರದಿಂದಲೇ ಅವನು ಕೃತಕೃತ್ಯನೂ ಆಗಬಹುದಾಗಿದೆ. ಇದೇ ಶಾಸ್ತ್ರದಿಂದಾಗುವ ಉಪಕಾರವು. ಆದ್ದರಿಂದ ಉಪಾಯದ ಮಿಥ್ಯಾತ್ವವೇನೂ ಬ್ರಹ್ಮಪ್ರಾಪ್ತಿಗೆ ಅಡ್ಡಿಯಾಗುವದಿಲ್ಲ- ಎಂದು ವಿವರಿಸಿದ್ದಾರೆ.

ಹೀಗೆ ವಿಚಾರಮಾಡಿದಾಗ ಶಾಸ್ತ್ರಪ್ರಾಮಾಣ್ಯವು ಯಾವ ಸಂಶಯವೂ ಇಲ್ಲದೆ ಸಿದ್ಧವಾಗುವದಲ್ಲದೆ ಶಾಸ್ತ್ರದಲ್ಲಿರುವ ಯಾವದೊಂದು ವಾಕ್ಯಕ್ಕೂ ನಾವು ಅರ್ಥಾಂತರಗಳನ್ನವಲಂಬಿಸುವ ಆವಶ್ಯಕತೆಯೇ ಇರುವದಿಲ್ಲ. ಆಯಾ ಪ್ರಕರಣಕ್ಕೆ ಅನುಗುಣವಾಗಿ ಎಲ್ಲಾ ಕಡೆಯಲ್ಲಿಯೂ ಶಾಸ್ತ್ರಕ್ಕೆ ಮುಖ್ಯಾರ್ಥವನ್ನೇ ಸ್ವೀಕರಿಸಿದಂತಾಗುತ್ತದೆ. ಇದರಿಂದ 'ಶಾಸ್ತ್ರಪುರುಷ'ನಿಗೂ ಸಂತೋಷವಾಗುತ್ತದೆ. ಇರತಕ್ಕದ್ದನ್ನು ಇದ್ದಂತೆಯೇ ಅರ್ಥಮಾಡುವ ಸಂಪ್ರದಾಯವನ್ನು ಕೈಬಿಟ್ಟರೆ ಶಾಸ್ತ್ರಸಮನ್ವಯವಾಗಲಿ ಪ್ರಾಮಾಣ್ಯವಾಗಲಿ ನಿರ್ವಿವಾದವಾಗಿ ಸಿದ್ಧವಾಗುವದಿಲ್ಲ. ಆದ್ದರಿಂದ ಜಿಜ್ಞಾಸುಗಳೆಲ್ಲರೂ ಶ್ರೀಶಂಕರಸಂಪ್ರದಾಯಬದ್ಧರಾಗಿಯೇ ಶಾಸ್ತ್ರಪ್ರಾಮಾಣ್ಯವನ್ನು ಗೊತ್ತುಪಡಿಸಿಕೊಳ್ಳಬೇಕು.

---

# ಗುರುಶಿಷ್ಯಸಂವಾದ

(ಸಂಪಾದಕರು)

**ಶಿಷ್ಯ :** ಗುರುವೆ, ಕರ್ಮಾರಂಭವನ್ನು ಹೇಗೆ ಮಾಡಬೇಕು ?

**ಗುರು :** ಆರಂಭಮಾಡುವಾಗಲೆಲ್ಲ ಓಂ ಎಂದು ದೀರ್ಘವಾಗಿ ಉಚ್ಚರಿಸಿ ಅನಂತರ ಮುಂದುವರೆಯಬೇಕು. ಓಂ ಎಂಬಿದು ಮಂಗಳವಾಚಕವಾದ ಪವಿತ್ರವಾದ ಶಬ್ದವಾಗಿರುತ್ತದೆ. ಆದ್ದರಿಂದ ಅದು ಕರ್ಮಾರಂಭದಲ್ಲಿ ಉಚ್ಚರಿಸಲ್ಪಡಬೇಕು.

**ಶಿಷ್ಯ :** ಮಂತ್ರಗಳನ್ನು ಉಚ್ಚರಿಸುತ್ತಿರುವಲ್ಲಿ ನಡುವೆ ನಿಲ್ಲಿಸಬಹುದೆ ?

**ಗುರು :** ಏನಾದರೂ ಅಡ್ಡಿಗಳಾದರೆ ನಿಲ್ಲಿಸಬೇಕಾಗುತ್ತದೆ. ಹೇಗೆಂದರೆ ಯಾರಾದರೂ ನಡುವೆ ಮಾತನಾಡಿಸಿದರೆ, ವ್ಯವಹಾರದ ಗದ್ದಲಗಳು ಅತಿಯಾದರೆ, ವಾಹನಗಳ ಕಿರುಚಾಟವೂ ಸದ್ದೂ ಹದ್ದುಮೀರಿದರೆ-ಸ್ವಲ್ಪಮಟ್ಟಿಗೆ ನಿಲ್ಲಿಸಿ ಅನಂತರ ಪ್ರಾರಂಭಿಸಬೇಕು. ಆಗ್ಗೆ ವಿಷ್ಣುಸ್ಮರಣೆಯನ್ನು ಮಾಡಬೇಕು.

**ಶಿಷ್ಯ :** ಕರ್ಮಕಾಲಕ್ಕೆ ಉಪವಾಸವಿದ್ದು ಮಾಡಬೇಕೆ ?

**ಗುರು :** ಹೌದು. ಏಕೆಂದರೆ ನಾವು ದೇವತೆಗಳನ್ನು ಆರಾಧಿಸುವಾಗ ಎಚ್ಚರಿಕೆಯಿಂದಿರಬೇಕು. ಮತ್ತು ನೈವೇದ್ಯವನ್ನು ಅವರಿಗೆ ಮೊದಲು ಸಮರ್ಪಣೆಮಾಡಿ ಅನಂತರ ಪ್ರಸಾದವಾಗಿ ನಾವು ತೆಗೆದುಕೊಳ್ಳಬೇಕು. ಇದನ್ನು 'ವಿೂಸಲು' ಎಂದು ಕರೆಯುತ್ತಾರೆ. ದೇವತಾಕಾರ್ಯಗಳು ಪೂರೈಸುವವರೆಗಾದರೂ ನಾವು ಏನೂ ಆಹಾರಪಾನೀಯಗಳನ್ನು ತೆಗೆದುಕೊಳ್ಳದೆ ಇರುವದೇ ಒಳ್ಳೆಯದು.

**ಶಿಷ್ಯ :** ಕೆಲವರು ಉಂಡು-ತಿಂದು ಮಾಡಿದ ಮೇಲೂ ಕರ್ಮಗಳನ್ನು ಮಾಡಬಹುದೆಂದು ಹೇಳುವರಲ್ಲ ?

**ಗುರು :** ಅದು ಸಂದರ್ಭಾನುಗುಣವಾಗಿ ಹೇಳಿದ್ದಾಗಿರುತ್ತದೆ. ಎಲ್ಲಕಡೆಯಲ್ಲೂ ಹಾಗೆ ಮಾಡಬಾರದು. ಉದಾಹರಣೆಗೆ ಉಪನಯನದಲ್ಲಿ ವಟುವಿಗೆ ಭೋಜನಾನಂತರವೇ ವಪನ, ಬ್ರಹ್ಮೋಪದೇಶ, ಅಗ್ನಿಕಾರ್ಯಗಳನ್ನು ಮಾಡಿಸುವರು. ಹಾಗೆಂತ ಪ್ರತಿದಿನವೂ ಅದನ್ನು ಅನುಸರಿಸಲಾದೀತೆ ? ಅಥವಾ ವಿವಾಹಾನಂತರವೂ ಬ್ರಹ್ಮಚಾರಿಯಂತೆ ಯಥೇಷ್ಟಭೋಜನವನ್ನು ಮಾಡಲಾದೀತೆ ? ಆದ್ದರಿಂದ ಬಹಳಮಟ್ಟಿಗೆ ಆಯಾ ಸಮಯಾನುಗುಣವಾಗಿ ಆಹಾರಪಾನೀಯಗಳ ಕಟ್ಟುಪಾಡನ್ನು ಶಾಸ್ತ್ರದಲ್ಲಿ ಹೇಳಿರುವಂತೆ ಅನುಸರಿಸಬೇಕು.

**ಶಿಷ್ಯ :** ಅಶಕ್ತತೆ, ಅಭ್ಯಾಸದೋಷಗಳೇ ಮುಂತಾದ ಸಂದರ್ಭಗಳಲ್ಲಿ ಉಪವಾಸಾದಿಗಳನ್ನು ಹೇಗೆ ಅಳವಡಿಸಿಕೊಳ್ಳಬೇಕು ?

**ಗುರು :** ರೋಗರುಜಿನಾದಿಗಳಿಂದ ಪೀಡಿತರಾದವರು ಪೂರ್ಣವಾಗಿ ಉಪವಾಸಮಾಡಲಾಗುವದಿಲ್ಲವಾಗಿ ಹಾಲನ್ನು ತೆಗೆದುಕೊಳ್ಳಬಹುದು. ಅನಂತರ ಕರ್ಮಾನುಷ್ಠಾನವನ್ನು ಮಾಡಬಹುದು. ಅಭ್ಯಾಸದ ವಿಷಯಕ್ಕೆ ಹೇಳುವದಾದರೆ ಕರ್ಮನಿಯಮಗಳನ್ನೇ ಹೆಚ್ಚುಹೆಚ್ಚಾಗಿ ಮನಸ್ಸಿಗೆ ತಂದುಕೊಳ್ಳುತ್ತಿದ್ದರೆ ಕ್ರಮ

ವಾಗಿ ಅಂಥ ದುರಭ್ಯಾಸಗಳನ್ನು ಗೆಲ್ಲಬಹುದು. ತೀರ ಅನಿವಾರ್ಯವಾದರೆ ಅವುಗಳಿಗೆ ಅವಕಾಶವನ್ನು ನೀಡಿದ್ದರಿಂದ ಕರ್ಮವೇ ಬೇಡ- ಎಂದು ಕೈಬಿಡುವ ಬದಲು ಮಾಡುವದೇ ಒಳ್ಳೆಯದು.

**ಶಿಷ್ಯ :** ಕರ್ಮವನ್ನು ಮಾಡುವಾಗ ತಪ್ಪಾಗಿ ಕೆಲವು ದೂರ ಆಚರಿಸಿದ್ದಲ್ಲಿ ಹೇಗೆ ?

**ಗುರು :** ಅಂಥ ಸಂದರ್ಭದಲ್ಲಿ ತಪ್ಪಾದ ಜಾಗದಿಂದ ಮುಂದಕ್ಕೆ ಮತ್ತೊಮ್ಮೆ ಸರಿಯಾಗಿ ಮಾಡಬೇಕು. ಆದರೆ ಮುಖ್ಯವಾದದ್ದನ್ನೇ ಕೈಬಿಟ್ಟುಬಿಟ್ಟಿದ್ದರೆ ಮೊದಲಿನಿಂದಲೇ ಮಾಡಬೇಕು. ಕೆಲವು ವೇಳೆ ಪ್ರಾಯಶ್ಚಿತ್ತವನ್ನೂ ಮಾಡಿಕೊಳ್ಳಬೇಕಾದೀತು.

**ಶಿಷ್ಯ :** ಕರ್ಮವನ್ನು ಮಾಡುವಾಗ ಯಾವ ದಿಕ್ಕಿಗೆ ಮುಖವನ್ನು ಮಾಡಿಕೊಂಡಿರಬೇಕು ?

**ಗುರು :** ವಿಶೇಷವಾಗಿ ಇಂಥ ದಿಕ್ಕಿಗೆ-ಎಂದು ಹೇಳದೆ ಇದ್ದಾಗ ಪೂರ್ವಕ್ಕಾಗಲಿ ಉತ್ತರದಿಕ್ಕಿಗಾಗಲಿ ಮುಖವನ್ನು ಮಾಡಿಕೊಂಡು ಅನುಷ್ಠಾನಮಾಡಬೇಕು. ಕರ್ಮವನ್ನು ಮಾಡುವ ಸ್ಥಳವು ವಿದಿಕ್ಕುಗಳಿಗೆ ಹೊಂದಿಕೊಳ್ಳುವಂತಿದ್ದರೆ ಈಶಾನ್ಯಕ್ಕೆ ಅಭಿಮುಖನಾಗಿ ಕುಳಿತು ಸಹ ಮಾಡಬಹುದು.

**ಶಿಷ್ಯ :** ಕರ್ಮಕಾಲಕ್ಕೆ ಶರೀರದ ಎಡಬಲಗಳಲ್ಲಿ ಯಾವದನ್ನು ಬಳಸಬೇಕು?

**ಗುರು :** ಏನೂ ಹೇಳದೆ ಇದ್ದಾಗ ಬಲಭಾಗವನ್ನೇ ಬಳಸಬೇಕು. ಬಲಗೈ, ಬಲಗಿವಿ, ಬಲಭುಜ-ಇತ್ಯಾದಿಗಳೇ ಶ್ರೇಷ್ಠವು. ವಿಶೇಷವಾಗಿ ಎಡಭಾಗವನ್ನು ಹೇಳಿದ್ದಲ್ಲಿ, ಅಥವಾ ಸಹಾಯಕವಾಗಿ ಎಡಭಾಗವನ್ನೂ ಉಪಯೋಗಿಸಬಹುದು. ಆದರೆ ಹೊಕ್ಕುಳಿನಿಂದ ಕೆಳಭಾಗಗಳನ್ನು ಕರ್ಮಾನುಷ್ಠಾನದ ಕಾಲಕ್ಕೆ ಮುಟ್ಟಿಕೊಳ್ಳಬಾರದು. ಮೈಕಡಿತ-ಮುಂತಾದ ನಿಮಿತ್ತಗಳಲ್ಲಿ ಕೂಡಲೇ ಕೈ ತೊಳೆದುಕೊಳ್ಳಬೇಕು. ಆಚಮನವನ್ನು ಸಮಯಾನುಸಾರ ಶುದ್ಧಿಗಾಗಿ ಮಾಡಬೇಕು.

**ಶಿಷ್ಯ :** ಕರ್ಮವನ್ನು ಮಾಡುತ್ತಿರುವಾಗ ಮೈಯಲ್ಲಿ ರಕ್ತವು ಕಂಡುಬಂದರೆ, ಪುರೀಷವಿಸರ್ಜನೆಯು ಅನಿವಾರ್ಯವಾದರೆ ಹೇಗೆ ?

**ಗುರು :** ಆಗ್ಗೆ ನಿಮಿತ್ತವು ಪೂರೈಸಿದ ಮೇಲೆ ಸ್ನಾನಮಾಡಿಯೇ ಮುಂದುವರೆಯಬೇಕು. ಆದರೆ ಅಪಾನವಾಯುವನ್ನು ವಿಸರ್ಜಿಸಿದಾಗ, ಗಟ್ಟಿಯಾಗಿ ನಕ್ಕಾಗ, ನೆಪ-ಹೇಳಿದಾಗ, ಬೆಕ್ಕು, ಇಲಿ-ಇವುಗಳನ್ನು ಮುಟ್ಟಿಸಿಕೊಂಡಾಗ, ಅಳು ಬಂದಾಗ, ಸಿಟ್ಟು ಬಂದಾಗ-ಇಂಥ ಸಂದರ್ಭಗಳಲ್ಲಿ ನೀರನ್ನು ಸ್ಪರ್ಶಿಸಿ ಆಚಮನಮಾಡಿದರೆ ಸಾಕು.

**ಶಿಷ್ಯ :** ಮಂತ್ರಗಳಿಗೆ ಸ್ವರವು ತಿಳಿಯದಾಗ ಹೇಗೆ ಹೇಳಬೇಕು ?

**ಗುರು :** ಅಂಥವುಗಳನ್ನು ಒಂದೇ ಸ್ವರದಿಂದ ಹೇಳಬೇಕು. ಮತ್ತು ಬಹುಜನರು ಸೇರಿ ಹೇಳುವಾಗಲೂ ಏಕಕಂಠ (ಧ್ವನಿ) ದಿಂದಲೇ ಉಚ್ಚರಿಸಬೇಕು.

---

# ಸಂಕ್ರಾಂತಿವ್ರತಗಳು-೨

(ಅಧ್ಯಾತ್ಮವಿದ್ಯಾಪ್ರವೀಣ ಶ್ರೀ ಕೆ. ಜಿ. ಸುಬ್ರಾಯಶರ್ಮರು, ಬೆಂಗಳೂರು)

ದ್ವಾದಶಸಂಕ್ರಾಂತಿಗಳಲ್ಲಿ ಮೊಟ್ಟಮೊದಲನೆಯದಾದ ಧಾನ್ಯಸಂಕ್ರಾಂತಿವ್ರತವನ್ನು ವಿಚಾರಮಾಡಿದ್ದಾಗಿದೆ. ಈಗ ಎರಡನೆಯದಾದ **ಲವಣಸಂಕ್ರಾಂತಿಯನ್ನು** ವಿಚಾರಮಾಡೋಣ. ವೃಷಭಸಂಕ್ರಮಣಪುಣ್ಯಕಾಲಕ್ಕೆ ಈ ವ್ರತವನ್ನು ಮಾಡಬೇಕು. ಸಾಧಕನು ಸ್ನಾನಮಾಡಿ ಅಲಂಕಾರಮಾಡಿಕೊಂಡು ಭಕ್ತಿಯಿಂದ ಕೂಡಿದವನಾಗಿ ಕುಂಕುಮದಿಂದ ಅಷ್ಟದಳಪದ್ಮವನ್ನು ಬರೆದು ಅದರ ಮೇಲೆ ಧಾನ್ಯವನ್ನಿರಿಸಿ ಮುಂಭಾಗದಲ್ಲಿ ಉಪ್ಪುತುಂಬಿದ ಒಂದು ಪಾತ್ರೆಯನ್ನು ಬೆಲ್ಲದೊಡನೆ ಸ್ಥಾಪಿಸಿ ಒಟ್ಟಾಗಿ ಪೂಜಿಸಬೇಕು. ಪೂಜಾಕಾಲಕ್ಕೆ ಸೂರ್ಯನನ್ನು ಧ್ಯಾನಿಸಬೇಕು. ಹೀಗೆ ಹನ್ನೆರಡುಸಂಕ್ರಾಂತಿಗಳಲ್ಲಿಯೂ ಪೂಜಿಸಿ ಚಿನ್ನದ ಸೂರ್ಯಪ್ರತಿಮೆಯನ್ನೂ ಕೆಂಪಾದ ಬಟ್ಟೆಯನ್ನೂ ಕಂಬಳಿಯನ್ನೂ ಉಪ್ಪಿನಪಾತ್ರೆಯನ್ನೂ ಹಸು-ಕರುಗಳ ಸಮೇತವಾಗಿ ಬ್ರಾಹ್ಮಣನಿಗೆ ದಾನಮಾಡಬೇಕು. ಹೀಗೆ ಮಾಡಿದರೆ ಸೂರ್ಯನು ತೃಪ್ತನಾಗುವನು. ಉಪ್ಪಿನ ಬೆಟ್ಟವನ್ನೇ ದಾನಮಾಡಿದವನಾಗುವನು. ಇದರ ಫಲವಾಗಿ ಹೆಚ್ಚಿನ ಪುಣ್ಯಲೋಕಗಳನ್ನು ಹೊಂದುವನು.

ಈಗ ಮೂರನೆಯದಾದ **ಭೋಗಸಂಕ್ರಾಂತಿಯನ್ನು** ವಿಚಾರಮಾಡೋಣ. ಇದನ್ನು ಮಿಥುನಸಂಕ್ರಮಣಪುಣ್ಯಕಾಲಕ್ಕೆ ಆರಂಭಿಸಿ ಮುಂದೆ ಹನ್ನೊಂದು ಸಂಕ್ರಾಂತಿಗಳಲ್ಲಿ ಮುಂದುವರಿಸಬೇಕು. ಇದರಲ್ಲಿ ವಿಶೇಷವೇನೆಂದರೆ : ಸುವಾಸಿನೀಪೂಜೆಯನ್ನು ಮಾಡಬೇಕು. ಮುತ್ತೈದೆಯರನ್ನು ಬರಮಾಡಿಕೊಂಡು ಅವರಿಗೆ ಮಂಗಳದ್ರವ್ಯಗಳು, ಸೀರೆ- ರವಿಕೆಗಳು, ಸುಗಂಧಾದಿಗಳು, ನೂರಕ್ಕೆ ಹೆಚ್ಚು ಸಂಖ್ಯೆಯ ವಿಳ್ಯದೆಲೆ, ಅಡಿಕೆಗಳು, ಅಕ್ಕಿ, ಬೆಲ್ಲ- ಮುಂತಾದವುಗಳನ್ನು ದಾನಮಾಡಬೇಕು. ಇಂಥ ಮುತ್ತೈದೆಯರು ನೂರೊಂದು ಜನರಾದರೂ ಇರಬೇಕು. ಅನಂತರ ಗಂಡಸರನ್ನೂ ಆಹ್ವಾನಿಸಿ ಒಟ್ಟು ೧೦೧ ದಂಪತಿಗಳಿಗೂ ಭೋಜನವನ್ನು ಮಾಡಿಸಬೇಕು. ಗಂಡಸರುಗಳಿಗೆ ಒಂದೊಂದು ಜೊತೆ ಪಂಚೆಯನ್ನೂ ಗೋವು-ದಕ್ಷಿಣೆಗಳನ್ನೂ ಸಮರ್ಪಿಸಬೇಕು. ಕಡೆಯಲ್ಲಿ ಸೂರ್ಯಭಗವಂತನನ್ನು ಪೂಜಿಸಿ ವ್ರತವನ್ನು ಸಮಾಪ್ತಿಗೊಳಿಸಬೇಕು. ಹೀಗೆ ಅನುಷ್ಠಾನಮಾಡಿದರೆ ಮಾನವನು ಸರ್ವಭೋಗಸಮೃದ್ಧಿಯನ್ನೂ ಹೊಂದುವನು-ಎಂದು ತಿಳಿಸಿದ್ದಾರೆ. ಇಂಥ ವ್ರತಗಳನ್ನು ಶ್ರೀಮಂತರಾದವರೇನೋ ಮಾಡಬಹುದು; ಬಡವರಾದವರು ಹೇಗೆ ಮಾಡಬೇಕು ? ಎಂದು ಕೇಳಿದರೆ ಅದಕ್ಕೂ ಸಮಾಧಾನವಿದೆ. ನೂರೊಂದರ ಸ್ಥಾನದಲ್ಲಿ ಒಬ್ಬಳೇ ಸುವಾಸಿನಿಯನ್ನು ( ಆಕೆಯು ತನ್ನ ಮಗಳಾದರೂ ಸರಿ ) ಆಹ್ವಾನಿಸಿ ಪೂಜಿಸಿ ದಾನದ್ರವ್ಯಗಳನ್ನೂ ಶಕ್ತಿಮೀರದಂತೆ ಅರ್ಪಿಸಿ ಸೂರ್ಯಪ್ರಾರ್ಥನೆಯನ್ನು ಮಾಡಿದಲ್ಲಿ ವ್ರತದ ಫಲವು ದೊರಕಲಿದೆ.

---

# ಬುದ್ಧಿ, ಜಾಣತನ

(ಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

ಜಾಣತನಕ್ಕೂ ಬುದ್ಧಿವಂತಿಕೆಗೂ ತಾರತಮ್ಯವಿದೆ. ಜಾಣನಾಗಿರುವದೆಂದರೆ ವಿಷಯಗಳನ್ನು ಬೇಗಬೇಗನೆ ಗ್ರಹಿಸುವದು. ತಿಳಿದದ್ದನ್ನು ಚೆನ್ನಾಗಿ ಉಪಯೋಗಿಸಿಕೊಳ್ಳುವದು, ಲೆಕ್ಕದಲ್ಲಿ ಜಾಣ, ಚಿತ್ರವನ್ನು ಬರೆಯುವದರಲ್ಲಿ ಜಾಣ, ಗುರಿಯಿಟ್ಟು ಹೊಡೆಯುವದರಲ್ಲಿ ಜಾಣ- ಹೀಗೆ ವ್ಯವಹಾರದಲ್ಲಿ ಕೌಶಲವಿರುವವರನ್ನು ಜಾಣರೆನ್ನುವೆವು. ಆದರೆ ಬುದ್ಧಿವಂತಿಕೆ–ಎಂದರೆ ಇದಲ್ಲ.

ಜಾಣತನವನ್ನು ಒಳ್ಳೆಯದರಲ್ಲಿ ತೋರಿಸುವವರಂತೆ ಕೆಟ್ಟದ್ದರಲ್ಲಿ ತೋರಿಸುವವರೂ ಉಂಟು. ಸುಳ್ಳು ಹೇಳಿ ಗೆದ್ದುಕೊಳ್ಳುವದರಲ್ಲಿ ಜಾಣ, ಜೂಜಿನಲ್ಲಿ ಜಾಣ, ಕಳವಿನಲ್ಲಿ ಜಾಣ, ಮತ್ತೊಬ್ಬರಿಗೆ ಮೋಸಮಾಡುವದರಲ್ಲಿ ಜಾಣ, ಲಂಚವನ್ನು ಲಪಟಾಯಿಸುವದರಲ್ಲಿ ಜಾಣ-ಎಂದು ಮಾಡಬಾರದ್ದನ್ನು ಕುಶಲತೆಯಿಂದ ಮಾಡಿದರೂ ಜಾಣರೆನಿಸುತ್ತಾರೆ. ಅನೇಕ ಜನರನ್ನು ಮಾತಿನಿಂದ ಬೆರಗುಮಾಡಿ ತಮ್ಮ ವಶಕ್ಕೆ ತೆಗೆದುಕೊಳ್ಳುವವರೂ ಭೌತಿಕವಿಜ್ಞಾನದ ಉಪಾಯಗಳನ್ನು ಪ್ರಯೋಗಿಸಿ ಸಾವಿರಾರು ಜನರನ್ನು ಕೊಂದು ಆಡಳಿತ-ಮುಂತಾದವನ್ನು ಗಳಿಸುವವರೂ ಮೋಸದ ಕೆಲಸಗಳಿಂದ ಧನಸಂಪಾದನೆಯನ್ನು ಮಾಡುವವರೂ ಜಾಣರಾಗಬಹುದು. ಇವರುಗಳು ಯಾರೂ ಬುದ್ಧಿವಂತರಲ್ಲ.

ಲೋಕಕ್ಕೆಲ್ಲ ಮೂಲವಾಗಿರುವ ಪರಮಾರ್ಥತತ್ತ್ವವೊಂದಿದೆ. ಅದೇ ನಮ್ಮಗಳೆಲ್ಲರ ಹೃದಯದೊಳಹೊಕ್ಕು ಎಂದೆಂದಿಗೂ ಆತ್ಮನಾಗಿದ್ದುಕೊಂಡಿರುತ್ತದೆ. ಅದನ್ನು ಭಗವಂತ, ಪರಮಾತ್ಮ, ಪರಮೇಶ್ವರ-ಎಂದು ಮುಂತಾಗಿ ಕರೆಯುತ್ತಾರೆ. ಯಾರು ಸ್ವಾರ್ಥಕ್ಕಾಗಿ ಜಾಣತನವನ್ನು ಉಪಯೋಗಿಸಿಕೊಳ್ಳದೆ ಆ ತತ್ತ್ವವನ್ನು ಅರಿತುಕೊಳ್ಳುವದಕ್ಕೆ ಎಡೆಬಿಡದೆ ಪ್ರಯತ್ನಿಸುವರೋ ಅವರು ಮಹಾತ್ಮರು. ಅದನ್ನು ಪರಿಪೂರ್ಣವಾಗಿ ಯಾರು ಅನುಭವದಿಂದ ಅರಿತುಕೊಂಡಿರುವರೋ ಅವರೇ ಬುದ್ಧಿವಂತರು. ಅವರಿಗೆ ಮಾತ್ರ ಶಾಶ್ವತವಾದ ಸೌಖ್ಯವು ಸಿಕ್ಕಿರುವದು.

ಸಂಸ್ಕೃತಭಾಷೆಯಲ್ಲಿ "ಬುದ್ಧಿಮಾನ್" ಎಂಬ ನಾಮಪದಕ್ಕೆ ಲಗತ್ತಾಗಿರುವ "ಮತುಪ್" ಎಂಬ ಪ್ರತ್ಯಯವು ಪ್ರಶಸ್ತಬುದ್ಧಿಯುಳ್ಳವನನ್ನೇ ತಿಳಿಸುತ್ತದೆ- ಎಂಬ ನಿಯಮವಿದೆ. ಕನ್ನಡಭಾಷೆಯಲ್ಲಿ "ಬುದ್ಧಿವಂತ" ಎಂದು ಆ ನಾಮಪದವು ಬಳಸಲ್ಪಟ್ಟಿದೆ. ಆದ್ದರಿಂದ ಪ್ರಶಸ್ತವೂ ಪವಿತ್ರವೂ ಮಂಗಳಕರವೂ ಶಾಂತವೂ ಆದ ಬ್ರಹ್ಮವನ್ನು ಬುದ್ಧಿಯಲ್ಲಿ ಧರಿಸಿದವನೇ ಬುದ್ಧಿವಂತನು, ಅವನ ಸ್ವಭಾವವೇ ಬುದ್ಧಿವಂತಿಕೆಯೆನಿಸಿರುತ್ತದೆ. ಈ ಬುದ್ಧಿವಂತನೇ ಕೃತಕೃತ್ಯನು.

# ಉಪಕಾರಸ್ಮರಣೆ

**ಪತ್ರಿಕೆಗೆ ನೂತನ ಮಹಾಪೋಷಕರುಗಳು :** ಶ್ರೀಯುತರುಗಳಾದ : MPN. 808. ಬಿ. ಎಸ್. ಅನಂತರಾಮುರವರು, ಬೆಂಗಳೂರು ; 809. ಎಂ. ಚಂದ್ರಶೇಖರ್‌ರವರು, ಬೆಂಗಳೂರು ; 810. ಎ.ವಿ. ಶ್ರೀಕಂಠಯ್ಯನವರು, ಬೆಂಗಳೂರು ; 811. ವಿಜಯಕುಮಾರ್‌ರವರು, ಬೆಂಗಳೂರು ; 812. ಶ್ರೀಮತಿ ಪ್ರೇಮಲೀಲಾ-ಶೆಟ್ಟಿಯವರು, ನಾರ್ತ್ ಆಗಸ್ತ (ಅಮೆರಿಕಾ); 813. ಕೆ. ಸೂರ್ಯನಾರಾಯಣರಾವ್‌ರವರು, ಬೆಂಗಳೂರು ; 814. ಶ್ರೀಮತಿ ಡಿ. ಪದ್ಮಾವತಮ್ಮನವರು, ಬೆಂಗಳೂರು– ಈ ಮಹನೀಯರುಗಳು ಹಾಗೂ ಮಹಿಳೆಯರು ರೂ. ೧೫೧ ರಂತೆ ಮಹಾಪೋಷಣದ್ರವ್ಯವನ್ನು ನೀಡಿ ಪತ್ರಿಕೆಯನ್ನು ಪ್ರೋತ್ಸಾಹಿಸಿದ್ದಾರೆ. MPO. 484. ಶ್ರೀ ಕೆ. ಎಸ್. ಶ್ರೀಧರರವರು, ತುಮಕೂರು ; 244. ಮೆ॥ ವೇದಾಂತ ಬುಕ್‌ಹೌಸ್, ಬೆಂಗಳೂರು– ಇವರುಗಳು ೫೧ರೂ. ನಂತೆ ಹೆಚ್ಚಿನ ಮಹಾಪೋಷಣದ್ರವ್ಯವನ್ನು ನೀಡಿ ಸಹಾಯಮಾಡಿದ್ದಾರೆ.

**೫೪ನೆಯ ಸಂಪುಟಕ್ಕೆ ಪೋಷಕರುಗಳು :** ಶ್ರೀಗಳಾದ : ಚಂದ ನಂ. 403. ಎಂ.ಎನ್. ವೆಂಕಟೇಶ್‌ರವರು, ಮಾಲೂರು ; **ದಾವಣಗೆರೆಯಲ್ಲಿ :** 406. ಎ.ವಿ. ಗೋವಿಂದಶೆಟ್ಟರು ; 407. ಜಿ.ಆರ್. ಮೃತ್ಯುಂಜಯರವರು ; 408. ಎಂ. ಎಸ್. ಸುಬ್ರಾಯರು ; 409. ಎಂ.ಕೆ. ಗುಂಡಪ್ಪನವರು ; 416. ಎಂ.ಸಿ. ಕೃಷ್ಣಮೂರ್ತಿಗಳು ; 417. ಹೆಚ್. ಎನ್. ಕೃಷ್ಣಮೂರ್ತಿರಾಯರು ; 418. ಡಾ॥ ಸಿ.ಬಿ. ಸುಬ್ರಹ್ಮಣ್ಯದೀಕ್ಷಿತರು ; 434. ಐ,ಜಿ. ಆದಿನಾರಾಯಣಶೆಟ್ಟರು ; 427. ಬಿ.ಎನ್. ನರಸಿಂಹಮೂರ್ತಿಯವರು, ಭರಮಸಾಗರ ; 428. ವಿ. ಶಿವಾನಂದಶಾಸ್ತ್ರಿಯವರು, ಹರಿಹರ–ಈ ಮಹನೀಯರುಗಳು ರೂ. ೨೦ರಂತೆ ಪೋಷಣದ್ರವ್ಯವನ್ನು ನೀಡಿ ಉಪಕರಿಸಿದ್ದಾರೆ.

1984ನೆಯ ಅಕ್ಟೋಬರ್ ಮಾಹೆಯಲ್ಲಿ ಈ ಕೆಳಗೆ ಕಂಡಂತೆ ಸಹಾಯ ದ್ರವ್ಯವನ್ನು ಕೃತಜ್ಞತೆಯಿಂದ ಸ್ವೀಕರಿಸಲಾಗಿದೆ :–

**ಗ್ರಂಥಪ್ರಕಟನೆಗೆ :** ಡಾ॥ ರಾಮದಾಸ್‌ರವರು, ಅಮೆರಿಕಾ– ಇವರಿಂದ ರೂ. ೧೦೦;

**ಗುರುಮಂದಿರನಿಧಿಗೆ :** ಒಬ್ಬ ಭಕ್ತರು, ತಿಪಟೂರು ರೂ. ೫೦; ಯಾದಾಳಂ ವಂಶೀಕರು, ರೂ. ೧೦. ಒಟ್ಟು ರೂ. ೬೦.

**ಪೂಜಾಮಂದಿರಕ್ಕೆ :** ಒಬ್ಬ ಭಕ್ತರು, ತಿಪಟೂರು ರೂ. ೫೦ ; ದಿ॥ ಶಾರದಮ್ಮನವರು, ಬೆಂಗಳೂರು–ಇವರ ನೆನಪಿಗಾಗಿ ಮಕ್ಕಳಿಂದ ರೂ. ೨೫ ; ಸೀತಾಲಕ್ಷ್ಮಿಯವರು, ಹಾಸನ ರೂ. ೨೩ ; ಯಾದಾಳಂ ವಂಶೀಕರು ರೂ. ೧೫ ; ಎ. ನರಸಿಂಹಮೂರ್ತಿಗಳು, ಹೊಳೆನರಸೀಪುರ ರೂ. ೧೦– ಒಟ್ಟು ರೂ. ೧೨೩.

**ಸಂನ್ಯಾಸಿಗಳ ಸತ್ಕಾರಖಾತೆಗೆ :** ಒಬ್ಬ ಭಕ್ತರು, ತಿಪಟೂರು ರೂ. ೧೦ ; ಒಬ್ಬ ಭಕ್ತರು, ರಾಣೆಬೆನ್ನೂರು ರೂ. ೧೦೦ ; ಶ್ರೀಮತಿ ನಾಗರತ್ನಮ್ಮನವರು, ತಿಪಟೂರು ರೂ. ೧೦– ಒಟ್ಟು ರೂ. ೧೨೦.

**ವಿದ್ಯಾರ್ಥಿಖಾತೆಗೆ :** ಒಬ್ಬ ಭಕ್ತರು, ರಾಣೆಬೆನ್ನೂರು ರೂ. ೧೦೦ ; ಕೆ. ನಂಜಪ್ಪನವರು, ಕೆಂಬಾಳು ರೂ. ೧೦– ಒಟ್ಟು ರೂ. ೧೧೦.

**ಅನುಷ್ಠಾನನಿಧಿಗೆ :** ಶ್ರೀ ಕೆ. ಎಸ್. ಚಂದ್ರಶೇಖರರಾವ್, ಶಿವಮೊಗ್ಗ ಇವರಿಂದ ರೂ. ೧೦.

**ಅತಿಥಿಸತ್ಕಾರಖಾತೆಗೆ :** ಶ್ರೀ ಸರ್ವಮಂಗಳಾ ಸ್ಟೋರ್ಸ್, ತಿಪಟೂರು ಇವರಿಂದ ರೂ. ೨೦.

**ಕಟ್ಟಡದ ನಿಧಿಗೆ:** ಶ್ರೀ ಕೆ.ಎ. ಭಾರದ್ವಾಜರವರು, ನವದೆಹಲಿ; ರೂ. ೨೬೦.

**ವಿಶೇಷಪ್ರಾರ್ಥನೆ :** ಬೃಹದಾರಣ್ಯಕಭಾಷ್ಯವು ಸದ್ಯದಲ್ಲೇ ಪ್ರಕಟವಾಗಲಿರುವದರಿಂದ **ಈ ಗ್ರಂಥಕ್ಕೆ ಧನಸಹಾಯವನ್ನು ವಾಗ್ದಾನಮಾಡಿರುವವರೆಲ್ಲರೂ** ದಯಮಾಡಿ ತಮ್ಮ ಉದಾರವಾದ ಪೋಷಣದ್ರವ್ಯವನ್ನು ತಾ॥ 31-12-84ರ ಅವಧಿಯೊಳಗೆ ಕಳುಹಿಸಿಕೊಡಬೇಕಾಗಿ ಬೇಡಿದೆ.

ಎಲ್ಲ ಮಹಾಶಯರುಗಳಿಗೂ ನಮ್ಮ ಅಭಿನಂದನೆಗಳು.

---

# ಮಹಾಜನರಲ್ಲಿ ಬಿನ್ನಹ

ಕಾರ್ಯಾಲಯದ ಪ್ರಕಟನೆಗಳಲ್ಲಿ ಅನೇಕ ಗ್ರಂಥಗಳು ಪುನರ್ಮುದ್ರಣಕ್ಕಾಗಿ ಕಾದು ಕುಳಿತಿವೆ. ಇವುಗಳಲ್ಲಿ ಕೆಲವಂತೂ ಬಹಳ ತ್ವರಿತವಾಗಿಯೇ ಪ್ರಕಟವಾಗಬೇಕಾಗಿದೆ. ಈಗಿನ ಕಾಲಪರಿಸ್ಥಿತಿಯಿಂದ ಕಾಗದದ ಬೆಲೆ, ಮುದ್ರಣವೆಚ್ಚಗಳನ್ನು ಲೆಕ್ಕ ಮಾಡಿದಾಗ ಡೆಮ್ಮಿ ೧೦೦ ಪುಟಗಳ ಒಂದು ಪುಸ್ತಕದ ಒಂದುಸಾವಿರ ಪ್ರತಿಗಳಿಗೆ ಕನಿಷ್ಠ ರೂ. ೪,೨೦೦ ಖರ್ಚಾಗುತ್ತದೆ. ಈ ಅಂದಾಜಿನಂತೆ ಕೆಳಗೆ ಹೆಸರಿಸಿರುವ ಗ್ರಂಥಗಳ ಪ್ರಕಟನೆಗೆ ತಗಲುವ ವೆಚ್ಚವನ್ನು ವಾಚಕರೇ ಊಹಿಸಿಕೊಳ್ಳಬಹುದಾಗಿದೆ.

ಅಧ್ಯಾತ್ಮಪ್ರಕಾಶಕಾರ್ಯಾಲಯದವರಲ್ಲಿ ಗ್ರಂಥಮಾರಾಟಗಳಿಂದ ಸಂಗ್ರಹಿಸಿದ ಧನವಿಲ್ಲವೆ? ಅದನ್ನೇ ಹೊಸಗ್ರಂಥಗಳ ಪ್ರಕಟನೆಗೆ ಏಕೆ ಬಳಸಬಾರದು? ಎಂದು ಕೆಲವರ ಪ್ರಶ್ನೆ. ನಿಜವೇನೆಂದರೆ: ಈಗಿರುವಂತೆ ಸಂಸ್ಥೆಯ ಸಿಬ್ಬಂದಿವೇತನ, ದೇವಾಲಯ, ಅತಿಥಿಸತ್ಕಾರಗಳು, ಮುದ್ರಣಾಲಯದ ದಿನಚರಿಯ ಸಾಮಾನುಗಳ ವೆಚ್ಚ, ಎಲೆಕ್ಟ್ರಿಕ್ ಛಾರ್ಜು, ಆಗಾಗ್ಗೆ ನಡೆಯುವ ಅನುಷ್ಠಾನ, ಉತ್ಸವಗಳು-ಮುಂತಾದವೆಲ್ಲ ಸೇರಿ **ಮಾಹೆಯಾನ ಐದುಸಾವಿರರೂಪಾಯಿಗಳ** ಖರ್ಚಿದೆ. ಪತ್ರಿಕೆಯ ಬಾಬಿನಲ್ಲಿ ಕಂಡಂತೆ ಸ್ವಲ್ಪ ನಷ್ಟವೇ ಆಗುತ್ತಿದೆ. ಕಟ್ಟಡದ ರಿಪೇರಿಗಳು, ಪುಸ್ತಕಭಂಡಾರದ ಆವಶ್ಯಕತೆಗಳು, ಇತರ ಅಭಿವೃದ್ಧಿಗಳಿಗೆ ಹಣವೇ ಒದಗುತ್ತಿಲ್ಲ. ಗ್ರಂಥಮಾರಾಟದ ಹಾಗೂ ಬ್ಯಾಂಕ್ ಬಡ್ಡಿ-ಹಣಗಳ ಬೆಂಬಲದಿಂದ ಈಗಿನ ಖರ್ಚುಗಳನ್ನು ಪ್ರಯಾಸದಿಂದ ಸರಿದೂಗಿಸಲಾಗುತ್ತಿದೆ.

ಈ ಪರಿಸ್ಥಿತಿಯಲ್ಲಿ ಗ್ರಂಥಪ್ರಕಟನೆಗೆ ಮಹಾಜನರಿಂದ ಕನಿಷ್ಠವಾಗಿ ಮುದ್ರಣ ಕಾಗದದ ಬೆಲೆಯಷ್ಟಾದರೂ ಸಹಾಯಧನವನ್ನು ಬೇಡಲೇಬೇಕಾಗಿದೆ. ಅನಂತರವು ಆಯಾಗ್ರಂಥಗಳ ಕೆಲವೇ ಪ್ರತಿಗಳು (ಶೇಕಡ ಹತ್ತರಷ್ಟು ಮಾತ್ರ) ಮಾರಾಟವಾದ ಮೇಲೆ ಉಳಿದವೆಲ್ಲ ಹಾಗೇ ಸ್ಟಾಕು ನಿಂತು ಬಿಡುತ್ತವೆ. ಇಂಥ ಸ್ಟಾಕು ಹಾಲಿ ಐದುಲಕ್ಷರೂಪಾಯಿಗಳಷ್ಟಿದೆ. ಇವು ಹಣದ ರೂಪಕ್ಕೆ ಪರಿವರ್ತನೆಯಾಗುವವರೆಗೂ ಏನೂ ಪ್ರಯೋಜನವಾಗುವಂತಿಲ್ಲ. ಅಧ್ಯಾತ್ಮಗ್ರಂಥಗಳಿಗೆ ಬೇಡಿಕೆಯೇ ಕಡಿಮೆ. ಆದ್ದರಿಂದ ಮಹಾಜನರು ಉದಾರಧನಸಹಾಯವನ್ನು ನೀಡಿದಲ್ಲಿ ಆಯಾಗ್ರಂಥಗಳ ಮುದ್ರಣದ ಮೂಲಭೂತವೆಚ್ಚದ ಹೊರೆಯು ಕಡಿಮೆಯಾಗುವದರಿಂದ ಆದಷ್ಟು ಕಡಿಮೆ ಬೆಲೆಗೆ ಗ್ರಂಥಗಳನ್ನು ಮಾರಾಟಮಾಡಬಹುದು. **ಈ ಕೆಳಗೆ ಹೆಸರಿಸಿರುವ ಗ್ರಂಥಗಳ ಪ್ರಕಟನೆಗೆ ಕೂಡಲೆ ಧನಸಹಾಯವು ಬೇಕಾಗಿದೆ.**

| | |
|---|---|
| ೧. ಛಾಂದೋಗ್ಯೋಪನಿಷದ್ಭಾಷ್ಯ | ಪುಟಗಳು : ೧,೧೦೦ |
| ೨. ಭಗವದ್ಗೀತೆಯ ಉಪನ್ಯಾಸಗಳು | ಪುಟಗಳು : ೧೨೮೦ |
| ೩. ಉಪದೇಶಸಾಹಸ್ರಿ (ಪದ್ಯಭಾಗ) | ಪುಟಗಳು : ೩೦೦ |
| ೪. ನೈಷ್ಕರ್ಮ್ಯಸಿದ್ಧಿ (ಕನ್ನಡಾನುವಾದ ಸಹಿತ) | ಪುಟಗಳು : ೪೦೦ |

ತಮ್ಮೆಲ್ಲರ ಉದಾರವಾದ ಸಹಾಯವನ್ನು ಬೇಡಿವೆ.

**ಅತೀವ ತೇಜಸಃ ಕೂಟಂ ಜ್ವಲಂತಮಿವ ಪರ್ವತಮ್ ।**
**ದದೃಶುಸ್ತೇ ಸುರಾಸ್ತತ್ರ ಜ್ವಾಲಾವ್ಯಾಪ್ತದಿಗಂತರಮ್ ॥೧೨॥**
**ಅತುಲಂ ತತ್ರ ತತ್ತೇಜಃ ಸರ್ವದೇವಶರೀರಜಮ್ ।**
**ಏಕಸ್ಥಂ ತದಭೂನ್ನಾರೀ ವ್ಯಾಪ್ತಲೋಕತ್ರಯಂ ತ್ವಿಷಾ ॥೧೩॥**
**ಯದಭೂತ್ ಶಾಂಭವಂ ತೇಜಃ ತೇನಾಜಾಯತ ತನ್ಮುಖಮ್ ।**

೧೨-೧೩. ಉರಿಯುತ್ತಿರುವ ಪರ್ವತದಂತಿರುವ ಹೆಚ್ಚಿನ ಆ ತೇಜೋರಾಶಿಯು ತನ್ನ ಜ್ವಾಲೆಗಳಿಂದ ದಿಕ್ಕಿನ ಕೊನೆಗಳನ್ನು ವ್ಯಾಪಿಸಿಕೊಂಡದ್ದನ್ನು ಅಲ್ಲಿ ದೇವತೆಗಳು ಕಂಡರು. ಎಲ್ಲಾ ದೇವತೆಗಳ ಶರೀರದಿಂದ ಹೊರಬಿದ್ದ ಅಪರಿಮಿತವಾದ ಆ ಬೆಳಕು ಒಂದಾಗಿ ಆಗ ಒಬ್ಬ ಸ್ತ್ರೀಯಾಯಿತು. ಆಕೆಯು ತನ್ನ ಕಾಂತಿಯಿಂದ ಮೂರು ಲೋಕಗಳನ್ನೂ ವ್ಯಾಪಿಸಿಕೊಂಡಳು. ಈಶ್ವರನ ತೇಜಸ್ಸೇನಿತ್ತೋ, ಅದರಿಂದ ಆಕೆಯ ಮುಖವು ಸೃಷ್ಟಿಯಾಯಿತು.

**ಯಾಮ್ಯೇನ ಚಾಭವನ್ ಕೇಶಾ ಬಾಹವೋ ವಿಷ್ಣುತೇಜಸಾ ।**
**ಸೌಮ್ಯೇನ ಸ್ತನಯೋರ್ಯುಗ್ಮಂ ಮಧ್ಯಂ ಚೈಂದ್ರೇಣ ಚಾಭವತ್ ॥**
**ವಾರುಣೇನ ಚ ಜಂಘೋರೂ ನಿತಂಬಸ್ತೇಜಸಾ ಭುವಃ ।**
**ಬ್ರಹ್ಮಣಸ್ತೇಜಸಾ ಪಾದೌ ತದಂಗುಲ್ಯೋऽರ್ಕತೇಜಸಾ ॥೧೫॥**
**ವಸೂನಾಂ ಚ ಕರಾಂಗುಲ್ಯಃ ಕೌಬೇರೇಣ ಚ ನಾಸಿಕಾ ।**
**ತಸ್ಯಾಸ್ತು ದಂತಾಃ ಸಂಭೂತಾಃ ಪ್ರಾಜಾಪತ್ಯೇನ ತೇಜಸಾ ॥೧೬॥**
**ನಯನತ್ರಿತಯಂ ಜಜ್ಞೇ ತಥಾ ಪಾವಕತೇಜಸಾ ।**
**ಭ್ರುವೌ ಚ ಸಂಧ್ಯಯೋಸ್ತೇಜಃ ಶ್ರವಣಾವನಿಲಸ್ಯ ಚ ॥೧೭॥**
**ಅನ್ಯೇಷಾಂ ಚೈವ ದೇವಾನಾಂ ಸಂಭವಸ್ತೇಜಸಾಂ ಶಿವಾ ।**

೧೪-೧೭. ಹಾಗೆಯೇ ಯಮನ (ಶಕ್ತಿ) ತೇಜಸ್ಸುಗಳಿಂದ ಆಕೆಯ ಕೂದಲುಗಳೂ ವಿಷ್ಣುವಿನ ತೇಜಸ್ಸಿನಿಂದ ತೋಳುಗಳೂ ಚಂದ್ರನ ತೇಜಸ್ಸಿನಿಂದ ಎರಡು ಸ್ತನಗಳೂ ಇಂದ್ರನ ತೇಜಸ್ಸಿನಿಂದ ಮಧ್ಯಭಾಗವೂ ವರುಣ ತೇಜಸ್ಸಿನಿಂದ ತೊಡೆ-ಮುಂಡಿಗಳೂ ಭೂದೇವಿಯ ತೇಜಸ್ಸಿನಿಂದ ಆಸನಭಾಗವೂ ಬ್ರಹ್ಮತೇಜಸ್ಸಿನಿಂದ ಪಾದಗಳೂ ಸೂರ್ಯತೇಜಸ್ಸಿನಿಂದ ಕಾಲುಬೆರಳುಗಳೂ ವಸುದೇವತೆಗಳ ತೇಜಸ್ಸಿನಿಂದ ಕೈಬೆರಳುಗಳೂ ಕುಬೇರತೇಜಸ್ಸಿನಿಂದ ಮೂಗೂ ಪ್ರಜಾಪತಿಯ ತೇಜಸ್ಸಿನಿಂದ ಆಕೆಯ ಹಲ್ಲುಗಳೂ ಅಗ್ನಿಯ ತೇಜಸ್ಸಿನಿಂದ ಮೂರು ಕಣ್ಣುಗಳೂ ಸಂಧ್ಯಾದೇವತೆಗಳ ತೇಜಸ್ಸಿನಿಂದ ಎರಡು ಹುಬ್ಬುಗಳೂ ವಾಯುದೇವತೆಯ ತೇಜಸ್ಸಿನಿಂದ ಕಿವಿಗಳೂ-ಉಂಟಾದವು. ಹೀಗೆಯೇ ಬೇರೆ ಬೇರೆಯ ದೇವತೆಗಳ ತೇಜಸ್ಸುಗಳ (ಸಮಷ್ಟಿಯ) ಸೃಷ್ಟಿಯೇ ದೇವಿಯಾಗಿದ್ದಳು.

4

**ತತಃ ಸಮಸ್ತದೇವಾನಾಂ ತೇಜೋರಾಶಿಸಮುದ್ಭವಾಮ್ ।**
**ತಾಂ ವಿಲೋಕ್ಯ ಮುದಂ ಪ್ರಾಪುರಮರಾ ಮಹಿಷಾರ್ದಿತಾಃ ॥೧೮॥**
**ಶೂಲಂ ಶೂಲಾದ್ ವಿನಿಷ್ಕೃಷ್ಯ ದದೌ ತಸ್ಯೈ ಪಿನಾಕಧೃಕ್ ।**
**ಚಕ್ರಂ ಚ ದತ್ತವಾನ್ ಕೃಷ್ಣಃ ಸಮುತ್ಪಾದ್ಯ ಸ್ವಚಕ್ರತಃ ॥೧೯॥**
**ಶಂಖಂ ಚ ವರುಣಃ ಶಕ್ತಿಂ ದದೌ ತಸ್ಯೈ ಹುತಾಶನಃ ।**
**ಮಾರುತೋ ದತ್ತವಾನ್ ಚಾಪಂ ಬಾಣಪೂರ್ಣೇ ತಥೇಷುಧೀ ॥೨೦॥**

೧೮-೨೦. ಅನಂತರ ಎಲ್ಲಾ ದೇವತೆಗಳ ತೇಜಸ್ಸಮೂಹದಿಂದ ಹುಟ್ಟಿ ಬಂದ ಆಕೆಯನ್ನು ಕಂಡು ಮಹಿಷಾಸುರನಿಂದ ಪೀಡಿಸಲ್ಪಟ್ಟಿದ್ದ ದೇವತೆಗಳು ಆನಂದಗೊಂಡರು. ಪಿನಾಕಪಾಣಿಯಾದ ಶಿವನು ತನ್ನ ತ್ರಿಶೂಲದಿಂದ ಮತ್ತೊಂದು ತ್ರಿಶೂಲವನ್ನು ನಿರ್ಮಿಸಿ ಆಕೆಗೆ ಕೊಟ್ಟನು. ವಿಷ್ಣುವೂ ಹಾಗೆಯೇ ತನ್ನ ಚಕ್ರದಿಂದ ಬೇರೊಂದು ಚಕ್ರವನ್ನು ಸಿದ್ಧಗೊಳಿಸಿಕೊಟ್ಟನು. ವರುಣನು ಶಂಖವನ್ನೂ ಅಗ್ನಿದೇವನು ಶಕ್ತ್ಯಾಯುಧವನ್ನೂ ಮಾರುತನು (ವಾಯುವು) ಬಿಲ್ಲನ್ನೂ ಮತ್ತು ಬಾಣಗಳಿಂದ ತುಂಬಿದ್ದ ಎರಡು ಬತ್ತಳಿಕೆಗಳನ್ನೂ ನೀಡಿದರು.

**ವಜ್ರಮಿಂದ್ರಂ ಸಮುತ್ಪಾದ್ಯ ಕುಲಿಶಾದಮರಾಧಿಪಃ ।**
**ದದೌ ತಸ್ಯೈ ಸಹಸ್ರಾಕ್ಷೋ ಘಂಟಾಮೈರಾವತಾದ್ ಗಜಾತ್ ॥೨೧॥**
**ಕಾಲದಂಡಾದ್ಯಮೋ ದಂಡಂ ಪಾಶಂ ಚಾಂಬುಪತಿರ್ದದೌ ।**
**ಪ್ರಜಾಪತಿಶ್ಚಾಕ್ಷಮಾಲಾಂ ದದೌ ಬ್ರಹ್ಮಾ ಕಮಂಡಲುಮ್ ॥೨೨॥**
**ಸಮಸ್ತರೋಮಕೂಪೇಷು ನಿಜರಶ್ಮೀನ್ ದಿವಾಕರಃ ।**
**ಕಾಲಶ್ಚ ದತ್ತವಾನ್ ಖಡ್ಗಂ ತಸ್ಯಾಶ್ಚರ್ಮ ಚ ನಿರ್ಮಲಮ್ ॥೨೩॥**
**ಕ್ಷೀರೋದಶ್ಚಾಮಲಂ ಹಾರಂ ಅಜರೇ ಚ ತಥಾಂಬರೇ ।**
**ಚೂಡಾಮಣಿಂ ತಥಾ ದಿವ್ಯಂ ಕುಂಡಲೇ ಕಟಕಾನಿ ಚ ॥೨೪॥**

೨೧-೨೪. ಇಂದ್ರನು ತನ್ನ ವಜ್ರಾಯುಧದಿಂದ ಮತ್ತೊಂದು ವಜ್ರಾಯುಧವನ್ನು ತಯಾರಿಸಿಕೊಟ್ಟನು. ಮತ್ತು ದೇವೇಂದ್ರನು ತನ್ನ ಐರಾವತವೆಂಬ ಆನೆಯಿಂದ ಘಂಟೆಯನ್ನು ತೆಗೆದುಕೊಟ್ಟನು. ಯಮನು ತನ್ನ ಕಾಲದಂಡದಿಂದ (ಮತ್ತೊಂದು) ದಂಡವನ್ನೂ ವರುಣನು ಪಾಶವನ್ನೂ (ಸೃಷ್ಟಿಸಿ)ಕೊಟ್ಟರು. ಪ್ರಜಾಪತಿಯು ಜಪಸರವನ್ನೂ ಬ್ರಹ್ಮದೇವನು ಕಮಂಡಲುವನ್ನೂ ಕೊಟ್ಟರು. ಸೂರ್ಯನು ಆ ದೇವಿಯ ಎಲ್ಲಾ ಮೈಗೂದಲುಗಳಲ್ಲಿಯೂ ತನ್ನ ಕಾಂತಿಯನ್ನು ಇಟ್ಟನು. ಕಾಲ(ಮೃತ್ಯುವು) ಕತ್ತಿಯನ್ನೂ ನಿರ್ಮಲವಾದ ಚರ್ಮ(ವೆಂಬ ಸಾಮಗ್ರಿಯನ್ನೂ) ನೀಡಿದನು. ಕ್ಷೀರಸಮುದ್ರರಾಜನು ಶುದ್ಧವಾದ (ರತ್ನಗಳ) ಹಾರವನ್ನೂ ನಾಶವಿಲ್ಲದ ಎರಡು ವಸ್ತ್ರಗಳನ್ನೂ, ( ಹೆರಳಿನಲ್ಲಿ ಧರಿಸುವ )

ಚೂಡಾಮಣಿಯೆಂಬ ಒಡವೆಯನ್ನೂ ಎರಡು ಜಂಡೋಲೆಗಳನ್ನೂ ಕೈಬಳೆಗಳನ್ನೂ ನೀಡಿದನು.

**ಅರ್ಧಚಂದ್ರಂ ತಥಾ ಶುಭ್ರಂ ಕೇಯೂರಾನ್ ಸರ್ವಬಾಹುಷು ।**
**ನೂಪುರಾ ವಿಮಲಾ ತದ್ವತ್ ಗ್ರೈವೇಯಕಮನುತ್ತಮಮ್ ॥೨೫॥**
**ಅಂಗುಲೀಯಕರತ್ನಾನಿ ಸಮಸ್ತಾಸ್ವಂಗುಲೀಷು ಚ ॥**

೨೫. (ಅದೇ ಸಮುದ್ರರಾಜನು) ಅರ್ಧಚಂದ್ರಾಕಾರದ ಶುಭ್ರವಾದ (ಹಣೆಬೊಟ್ಟನ್ನೂ) ಎಲ್ಲಾ ತೋಳುಗಳಿಗೂ ತೋಳುಬಳೆಗಳನ್ನೂ (ಭುಜಕೀರ್ತಿಗಳನ್ನೂ) ವಿಮಲವಾದ ಎರಡು ಕಾಲುಗೆಜ್ಜೆಗಳನ್ನೂ ಹಾಗೆಯೇ ಅಮೂಲ್ಯವಾದ ಕಂಠಾಭರಣ (Neck Lace) ವನ್ನೂ ಎಲ್ಲಾ ಬೆರಳುಗಳಿಗೂ ರತ್ನದ ಉಂಗುರಗಳನ್ನೂ ಕೊಟ್ಟನು.

**ವಿಶ್ವಕರ್ಮಾ ದದೌ ತಸ್ಯೈ ಪರಶುಂ ಚಾತಿನಿರ್ಮಲಮ್ ।**
**ಅಸ್ತ್ರಾಣ್ಯನೇಕರೂಪಾಣಿ ತಥಾಭೇದ್ಯಂ ಚ ದಂಶನಮ್ ॥ ೨೬ ॥**
**ಅಮ್ಲಾನಪಂಕಜಾಂ ಮಾಲಾಂ ಶಿರಸ್ಯುರಸಿ ಚಾಪರಾಮ್ ।**
**ಅದದತ್ ಜಲಧಿಸ್ತಸ್ಯೈ ಪಂಕಜಂ ಚಾತಿಶೋಭನಮ್ ॥ ೨೭ ॥**
**ಹಿಮವಾನ್ ವಾಹನಂ ಸಿಂಹಂ ರತ್ನಾನಿ ವಿವಿಧಾನಿ ಚ ।**
**ದದಾವಶೂನ್ಯಂ ಸುರಯಾ ಪಾನಪಾತ್ರಂ ಧನಾಧಿಪಃ ॥ ೨೮ ॥**

೨೬-೨೮. ವಿಶ್ವಕರ್ಮನೆಂಬ (ದೇವಶಿಲ್ಪಿಯು) ಆಕೆಗೆ ಅತಿನಿರ್ಮಲವಾದ ಕೊಡಲಿಯನ್ನೂ ಹಾಗೂ ಅನೇಕರೀತಿಯಾದ ಅಸ್ತ್ರಾಯುಧಗಳನ್ನೂ ಭೇದಿಸಲು ಬಾರದ ಕವಚವನ್ನೂ ಕೊಟ್ಟನು. ಸಮುದ್ರರಾಜನು ಆಕೆಗೆ ಬಾಡದೆ ಇರುವ ಕಮಲದ ಹೂವುಗಳುಳ್ಳ ಎರಡು ಮಾಲೆಗಳನ್ನು ತುರುಬಿನಲ್ಲಿ ಮುಡಿಯಲು ಹಾಗೂ ವಕ್ಷಸ್ಥಲದಲ್ಲಿ ಧರಿಸಲು ತಕ್ಕಂಥವುಗಳನ್ನುಕೊಟ್ಟನು. ಮತ್ತು ಅತಿಮುದ್ದಾದ ಒಂದು ತಾವರೆಯನ್ನೂ ನೀಡಿದನು. (ಗಿರಿರಾಜನಾದ) ಹಿಮವಂತನು ವಾಹನವಾಗಿ ಆಕೆಗೆ ಒಂದು ಸಿಂಹವನ್ನೂ (ಅಲಂಕಾರಕ್ಕಾಗಿ) ವಿವಿಧರತ್ನಗಳನ್ನೂ ನೀಡಿದನು. ಕುಬೇರನು ಸುರೆ (ಮದ್ಯ)ಯು ಎಂದೂ ಖಾಲಿಯಾಗದ ಒಂದು ಕುಡಿಯುವ ಪಾತ್ರೆಯನ್ನು ಕೊಟ್ಟನು.

**ಶೇಷಶ್ಚ ಸರ್ವನಾಗೇಶೋ ಮಹಾಮಣಿವಿಭೂಷಿತಮ್ ।**
**ನಾಗಹಾರಂ ದದೌ ತಸ್ಯೈ ಧತ್ತೇ ಯಃ ಪೃಥಿವೀಮಿಮಾಮ್ ॥ ೨೯ ॥**
**ಅನ್ಯೈರಪಿ ಸುರೈರ್ದೇವೀ ಭೂಷಣೈರಾಯುಧೈಸ್ತಥಾ ।**
**ಸಂಮಾನಿತಾ ನನಾದೋಚ್ಚೈಃ ಸಾಟ್ಟಹಾಸಂ ಮುಹುರ್ಮುಹುಃ ॥೩೦॥**

೨೯-೩೦. ಎಲ್ಲಾ ನಾಗಗಳಿಗೂ ಒಡೆಯನಾದ ಹಾಗೂ ಈ ಭೂಮಿಯನ್ನು (ತನ್ನ ಹೆಡೆಗಳಿಂದ) ಧರಿಸಿರುವ ಆದಿಶೇಷನು ಮಹಾಮಣಿಗಳಿಂದ ಅಲಂಕೃತವಾದ ನಾಗರತ್ನಗಳ ಹಾರವೊಂದನ್ನು ಆಕೆಗೆ ಕೊಟ್ಟನು. ಹೀಗೆ ದೇವಿಯು ಬೇರೆಬೇರೆಯ ದೇವತೆಗಳಿಂದಲೂ (ನಾನಾವಿಧವಾದ) ಒಡವೆಗಳು, ಆಯುಧಗಳಿಂದ ಗೌರವಿಸಲ್ಪಟ್ಟವಳಾಗಿ ಮತ್ತೆಮತ್ತೆ ಅಟ್ಟಹಾಸದಿಂದ ಗಟ್ಟಿಯಾಗಿ ನಾದಮಾಡಿದಳು.

**ತಸ್ಯಾ ನಾದೇನ ಘೋರೇಣ ಕೃತ್ಸ್ನಮಾಪೂರಿತಂ ನಭಃ ।**
**ಅಮಾಯತಾತಿಮಹತಾ ಪ್ರತಿಶಬ್ದೋ ಮಹಾನಭೂತ್ ॥ ೩೧ ॥**
**ಚುಕ್ಷುಭುಃ ಸಕಲಾ ಲೋಕಾಃ ಸಮುದ್ರಾಶ್ಚ ಚಕಂಪಿರೇ ।**
**ಚಚಾಲ ವಸುಧಾ ಚೇಲುಃ ಸಕಲಾಶ್ಚ ಮಹೀಧರಾಃ ॥ ೩೨ ॥**
**ಜಯೇತಿ ದೇವಾಶ್ಚ ಮುದಾ ತಾಮೂಚುಃ ಸಿಂಹವಾಹಿನೀಮ್ ।**
**ತುಷ್ಟುವುರ್ಮುನಯಶ್ಚೈನಾಂ ಭಕ್ತಿನಮ್ರಾತ್ಮಮೂರ್ತಯಃ ॥ ೩೩ ॥**

೩೧-೩೩. ಆಕೆಯ ಭಯಂಕರವಾದ ಆ ನಾದದಿಂದ ಇಡಿಯ ಆಕಾಶವೆಲ್ಲವೂ ತುಂಬಿಹೋಯಿತು. ಅತಿ ಹೆಚ್ಚಿನ ರೀತಿಯಿಂದ ಶಬ್ದವಾಯಿತು. ಅದರಿಂದ ಪ್ರತಿಧ್ವನಿಯೂ ದೊಡ್ಡದಾಗಿ ಉಂಟಾಯಿತು. ಇದರಿಂದ ಎಲ್ಲಾ ಲೋಕಗಳೂ ಗಾಬರಿಗೊಂಡವು. ಸಮುದ್ರಗಳು ಅಲ್ಲಾಡಿಹೋದವು. ಭೂಮಿಯು ನಡುಗಿಬಿಟ್ಟಳು. ಪರ್ವತಗಳೆಲ್ಲವೂ ಚಲಿಸಿಬಿಟ್ಟವು. ಆಗ ದೇವತೆಗಳು ಸಿಂಹವಾಹಿನಿಯಾದ ಆಕೆಯನ್ನು ಕುರಿತು ಸಂತೋಷದಿಂದ ಜಯಕಾರಮಾಡಿದರು. ಭಕ್ತಿಯಿಂದ ಬಗ್ಗಿದ ಶರೀರವುಳ್ಳ ಮುನಿಗಳು ಸ್ತೋತ್ರಮಾಡಿದರು.

**ದೃಷ್ಟ್ವಾ ಸಮಸ್ತಂ ಸಂಕ್ಷುಬ್ಧಂ ತ್ರೈಲೋಕ್ಯಮಮರಾರಯಃ ।**
**ಸಂನದ್ಧಾಖಿಲಸೈನ್ಯಾಸ್ತೇ ಸಮುತ್ತಸ್ಥುರುದಾಯುಧಾಃ ॥ ೩೪ ॥**
**ಆಃ ಕಿಮೇತದಿತಿ ಕ್ರೋಧಾದಾಭಾಷ್ಯ ಮಹಿಷಾಸುರಃ ।**
**ಅಭ್ಯಧಾವತ ತಂ ಶಬ್ದಮಶೇಷೈರಸುರೈರ್ವೃತಃ ॥ ೩೫ ॥**

೩೪-೩೫. ಮೂರು ಲೋಕಗಳೆಲ್ಲವೂ ಬಹಳವಾಗಿ ಗಲಿಬಿಲಿಯಾದದ್ದನ್ನು ಕಂಡು ದೇವಶತ್ರುಗಳಾದ (ರಾಕ್ಷಸರು) ಎಲ್ಲಾ ಸೈನ್ಯವನ್ನೂ ಸಜ್ಜುಗೊಳಿಸಿಕೊಂಡು ಆಯುಧಗಳನ್ನು ಎತ್ತಿ (ಹಿಡಿದವರಾಗಿ) ಮೇಲೆದ್ದರು. ಮಹಿಷಾಸುರನಾದರೊ, ಆಹಾ ! ಇದೇನು ? ಎಂದು ಕೋಪದಿಂದ ಘರ್ಜಿಸಿದವನಾಗಿ ಎಲ್ಲಾ ರಾಕ್ಷಸರೊಡಗೂಡಿ ಆ ಶಬ್ದವು ಬಂದಲ್ಲಿಗೆ ಎದುರಾಗಿ ಓಡಿಬಂದನು.

**ಸ ದದರ್ಶ ತತೋ ದೇವೀಂ ವ್ಯಾಪ್ತಲೋಕತ್ರಯಾಂ ತ್ವಿಷಾ ।**
**ಪಾದಾಕ್ರಾಂತ್ಯಾ ನತಭುವಂ ಕಿರೀಟೋಲ್ಲಿಖಿತಾಂಬರಾಮ್ ॥ ೩೬ ॥**

**ಕ್ಷೋಭಿತಾಶೇಷಪಾತಾಲಾಂ ಧನುರ್ಜ್ಯಾನಿಃಸ್ವನೇನ ತಾಮ್ ।**
**ದಿಶೋ ಭುಜಸಹಸ್ರೇಣ ಸಮಂತಾದ್ ವ್ಯಾಪ್ಯ ಸಂಸ್ಥಿತಾಮ್ ॥ ೩೬ ॥**

೩೬–೩_. ಆತನು ಅನಂತರ ಮೂರು ಲೋಕಗಳನ್ನೂ ತನ್ನ ಕಾಂತಿಯಿಂದ ವ್ಯಾಪಿಸಿಕೊಂಡಿದ್ದ ಹಾಗೂ ಹೆಜ್ಜೆಯನ್ನಿಟ್ಟಾಗ ಬಗ್ಗಿ ನಮಸ್ಕರಿಸುವ ಭೂದೇವೀಸಹಿತಳೂ ಆಕಾಶವನ್ನೆಲ್ಲ ಕಿರೀಟದಲ್ಲಿ (ಅಡಗಿಸಿಕೊಂಡು) ಎದ್ದು ಹೊಳೆಯುತ್ತಿರುವವಳೂ ಆದ ದೇವಿಯನ್ನು ಕಂಡನು. ಆಕೆಯು ತನ್ನ ಧನುಸ್ಸಿನ ಟಂಕಾರಧ್ವನಿಯಿಂದ ಇಡಿಯ ಪಾತಾಳಲೋಕವನ್ನೆಲ್ಲ ಕ್ಷೋಭಗೊಳ್ಳುವಂತೆ ಮಾಡಿದವಳಾಗಿಯೂ ಸಾವಿರಭುಜಗಳಿಂದ ಎಲ್ಲೆಲ್ಲೂ ವ್ಯಾಪಿಸಿಕೊಂಡು ನೆಲೆಸಿದವಳಾಗಿಯೂ ಕಂಡುಬಂದಳು.

**ತತಃ ಪ್ರವವೃತೇ ಯುದ್ಧಂ ತಯಾ ದೇವ್ಯಾ ಸುರದ್ವಿಷಾಮ್ ।**
**ಶಸ್ತ್ರಾಸ್ತ್ರೈರ್ಬಹುಧಾ ಮುಕ್ತೈರಾದೀಪಿತದಿಗಂತರಮ್ ॥ ೩೮ ॥**
**ಮಹಿಷಾಸುರಸೇನಾನೀಶ್ಚಿಕ್ಷುರಾಖ್ಯೋ ಮಹಾಸುರಃ ।**
**ಯುಯುಧೇ ಚಾಮರಶ್ಚಾನ್ಯೈಶ್ಚತುರಂಗಬಲಾನ್ವಿತಃ ॥ ೩೯ ॥**
**ರಥಾನಾಮಯುತೈಃ ಷಡ್ಭಿಃ ಉದಗ್ರಾಖ್ಯೋ ಮಹಾಸುರಃ ।**
**ಅಯುಧ್ಯತಾಯುತಾನಾಂ ಚ ಸಹಸ್ರೇಣ ಮಹಾಹನುಃ ॥ ೪೦ ॥**

೩೮–೪೦. ಅನಂತರ ಆ ದೇವಿಯೊಡನೆ ರಾಕ್ಷಸರಿಗೆ ಯುದ್ಧವು ಸಂಘಟಿಸಿತು. ಬಹಳವಾದ ಶಸ್ತ್ರಾಸ್ತ್ರಗಳ ಉಪಯೋಗದಿಂದ ದಿಕ್ಕುಗಳೆಲ್ಲವೂ ಹೊಳೆಯುವಂತೆ ಅದು ನಡೆಯಿತು. ಮಹಿಷಾಸುರನ ಸೇನಾಪತಿಯಾದ ಚಿಕ್ಷುರ ಎಂಬ ಮಹಾರಾಕ್ಷಸನೂ ಮತ್ತೊಬ್ಬ (ಸೇನಾಧಿಪತಿಯಾದ) ಚಾಮರನೆಂಬುವನೂ ಚತುರಂಗಸೈನ್ಯದಿಂದಲೂ ಅರವತ್ತುಸಾವಿರ ಸಂಖ್ಯೆಯ ರಥಗಳಿಂದಲೂ ಕೂಡಿದವರಾಗಿಯೂ ಹಾಗೆಯೇ ಭಯಂಕರವಾದ ಕೋರೆದಾಡೆಗಳುಳ್ಳ ಉದಗ್ರನೆಂಬವನು ಕೋಟಿ (ರಥ) ಗಳಿಂದಲೂ ಕೂಡಿದವನಾಗಿಯೂ ಯುದ್ಧಮಾಡಿದರು.

**ಪಂಚಾಶದ್ಭಿಶ್ಚ ನಿಯುತೈರಸಿಲೋಮಾ ಮಹಾಸುರಃ ।**
**ಅಯುತಾನಾಂ ಶತೈಷ್ಷಡ್ಭಿಃ ಬಾಷ್ಕಲೋ ಯುಯುಧೇ ರಣೇ ॥ ೪೧ ॥**
**ಗಜವಾಜಿಸಹಸ್ರೌಘೈರನೇಕೈಃ ಪರಿವಾರಿತಃ ।**
**ವೃತೋ ರಥಾನಾಂ ಕೋಟ್ಯಾ ಚ ಯುದ್ಧೇ ತಸ್ಮಿನ್ನಯುಧ್ಯತ ॥ ೪೨ ॥**

೪೧–೪೨. ಐವತ್ತುಲಕ್ಷ ರಥಗಳಿಂದ ಕೂಡಿದ ಮಹಾಸುರನಾದ ಅಸಿಲೋಮನೆಂಬವನೂ ಅರವತ್ತು ಲಕ್ಷ ಸೈನ್ಯದೊಡನೆ ಬಾಷ್ಕಲನೆಂಬುವನೂ ಆ ಯುದ್ಧದಲ್ಲಿ ಕಾದಾಡಿದರು. ಅದೇ ಬಾಷ್ಕಲನು ಸಾವಿರಾರು ಆನೆ ಕುದುರೆಗಳ ಪರಿವಾರದಿಂದಲೂ ಕೋಟಿ ಸಂಖ್ಯೆಯ ರಥಗಳಿಂದಲೂ ಕೂಡಿಕೊಂಡು ಯುದ್ಧಮಾಡಿದನು.

**ಬಿಡಾಲಾಖ್ಯೋಽಯುತಾನಾಂ ಚ ಪಂಚಾಶದ್ಭಿರಥಾಯುತೈಃ ।**
**ಯುಯುಧೇ ಸಂಯುಗೇ ತತ್ರ ರಥಾನಾಂ ಪರಿವಾರಿತಃ ॥ ೪೩ ॥**
**ಅನ್ಯೇ ಚ ತತ್ರಾಯುತಶೋ ರಥನಾಗಹಯೈರ್ವೃತಾಃ ।**
**ಯುಯುಧುಃ ಸಂಯುಗೇ ದೇವ್ಯಾ ಸಹ ತತ್ರ ಮಹಾಸುರಾಃ ॥೪೪॥**
**ಕೋಟಿಕೋಟಿಸಹಸ್ರೈಸ್ತು ರಥಾನಾಂ ದಂತಿನಾಂ ತಥಾ ।**
**ಹಯಾನಾಂ ಚ ವೃತೋ ಯುದ್ಧೇ ತತ್ರಾಭೂನ್ಮಹಿಷಾಸುರಃ ॥ ೪೫ ॥**
**ತೋಮರೈರ್ಭಿಂದಿಪಾಲೈಶ್ಚ ಶಕ್ತಿಭಿರ್ಮುಸಲೈಸ್ತಥಾ ।**
**ಯುಯುಧುಃ ಸಂಯುಗೇ ದೇವ್ಯಾ ಖಡ್ಗೈಃ ಪರಶುಪಟ್ಟಿಶೈಃ ॥೪೬॥**

೪೩–೪೬. ಬಿಡಾಲನೆಂಬುವನು ಐದು ಲಕ್ಷ ರಥಗಳಿಂದ ಸುತ್ತುವರೆಯಲ್ಪಟ್ಟವನಾಗಿ ಯುದ್ಧದಲ್ಲಿ ಕಾದಾಡಿದನು. ಇನ್ನೂ ಕೆಲವರು ಮಹಾರಾಕ್ಷಸರು ಹತ್ತುಸಾವಿರಗಟ್ಟಲೆ ರಥಗಳು, ಆನೆಗಳು, ಕುದುರೆಗಳಿಂದ ಕೂಡಿದವರಾಗಿ ದೇವಿಯೊಡನೆ ಯುದ್ಧಮಾಡಿದರು. ಮಹಿಷಾಸುರನಾದರೊ, ಕೋಟಿಕೋಟಿ ಸಹಸ್ರ ಸಂಖ್ಯೆಯ ರಥಗಳು, ಆನೆಗಳು, ಕುದುರೆಗಳಿಂದ ಪರಿವಾರಿತನಾಗಿ ಯುದ್ಧದಲ್ಲಿ ಪಾಲ್ಗೊಂಡಿದ್ದನು. ತೋಮರ, ಭಿಂದಿಪಾಲ, ಶಕ್ತಿ, ಮುಸಲಗಳೆಂಬ ಹಾಗೂ ಕತ್ತಿ, ಕೊಡಲಿ, ಪಟ್ಟಿಶಗಳೆಂಬ ವಿವಿಧವಾದ (ಆಯುಧಗಳಿಂದ ರಾಕ್ಷಸರುಗಳು) ದೇವಿಯೊಡನೆ ಯುದ್ಧಮಾಡಿದರು.

**ಕೇಚಿಚ್ಚ ಚಿಕ್ಷಿಪುಃ ಶಕ್ತೀಃ ಕೇಚಿತ್ ಪಾಶಾಂಸ್ತಥಾಪರೇ ।**
**ದೇವೀಂ ಖಡ್ಗಪ್ರಹಾರೈಸ್ತು ತೇ ತಾಂ ಹಂತುಂ ಪ್ರಚಕ್ರಮುಃ ॥ ೪೭ ॥**
**ಸಾಪಿ ದೇವೀ ತತಸ್ತಾನಿ ಶಸ್ತ್ರಾಣ್ಯಸ್ತ್ರಾಣಿ ಚಂಡಿಕಾ ।**
**ಲೀಲಯೈವ ಪ್ರಚಿಚ್ಛೇದ ನಿಜಶಸ್ತ್ರಾಸ್ತ್ರವರ್ಷಿಣೀ ॥ ೪೮ ॥**
**ಅನಾಯಸ್ತಾನನಾ ದೇವೀ ಸ್ತೂಯಮಾನಾ ಸುರರ್ಷಿಭಿಃ ।**
**ಮುಮೋಚಾಸುರದೇಹೇಷು ಶಸ್ತ್ರಾಣ್ಯಸ್ತ್ರಾಣಿ ಚೇಶ್ವರೀ ॥ ೪೯ ॥**

೪೭–೪೯. ಕೆಲವರು ಶಕ್ತ್ಯಾಯುಧಗಳನ್ನೂ ಕೆಲವರು ಪಾಶಗಳನ್ನೂ ಮತ್ತೆ ಕೆಲವರು ಕತ್ತಿಯ ಹೊಡೆತಗಳನ್ನೂ ದೇವಿಯ ಮೇಲೆ ಪ್ರಯೋಗಿಸಿದರು. ಅವರೆಲ್ಲರೂ ದೇವಿಯನ್ನು ಕೊಲ್ಲಲ್ಲು ಮುನ್ನುಗ್ಗಿದರು. ಅನಂತರ ಆ ಚಂಡಿಕಾದೇವಿಯಾದರೊ, ಆ ಶಸ್ತ್ರಾಸ್ತ್ರಗಳೆಲ್ಲವನ್ನೂ ಲೀಲಾಮಾತ್ರದಿಂದ ಕತ್ತರಿಸಿ ಹಾಕಿದಳು. ದೇವರ್ಷಿಗಳಿಂದ ಸ್ತೋತ್ರಮಾಡಲ್ಪಡುತ್ತಿರುವ ಈಶ್ವರಿಯಾದ ದೇವಿಯು ಆಯಾಸವಿಲ್ಲದ ಮುಖದಿಂದ ಕೂಡಿಯೇ ರಾಕ್ಷಸರ ಶರೀರಗಳ ಮೇಲೆ ಶಸ್ತ್ರಾಸ್ತ್ರಗಳನ್ನು ಮಳೆಗರೆದಳು.

**ಸೋಽಪಿ ಕುದ್ಧೋ ಧುತಸಟೋ ದೇವ್ಯಾ ವಾಹನಕೇಸರೀ ।**
**ಚಚಾರಾಸುರಸೈನ್ಯೇಷು ವನೇಷ್ವಿವ ಹುತಾಶನಃ ॥೫೦॥**
**ನಿಃಶ್ವಾಸಾನ್ ಮುಮುಚೇ ಯಾಂಶ್ಚ ಯುಧ್ಯಮಾನಾ ರಣೇಂಬಿಕಾ ।**
**ತ ಏವ ಸದ್ಯಃ ಸಂಭೂತಾಃ ಗಣಾಃ ಶತಸಹಸ್ರಶಃ ॥೫೧॥**
**ಯುಯುಧುಸ್ತೇ ಪರಶುಭಿರ್ಭಿಂದಿಪಾಲಾಸಿಪಟ್ಟಿಶೈಃ ।**
**ನಾಶಯಂತೋಽಸುರಗಣಾನ್ ದೇವೀಶಕ್ತ್ಯುಪಬೃಂಹಿತಾಃ ॥೫೨॥**
**ಅವಾದಯಂತ ಪಟಹಾನ್ ಗಣಾಃ ಶಂಖಾಂಸ್ತಥಾಪರೇ ।**
**ಮೃದಂಗಾಂಶ್ಚ ತಥೈವಾನ್ಯೇ ತಸ್ಮಿನ್ ಯುದ್ಧಮಹೋತ್ಸವೇ ॥೫೩॥**

೫೦-೫೩. ದೇವಿಯ ವಾಹನಶ್ರೇಷ್ಠವಾದ ಸಿಂಹವು ಕೂಡ ಕೋಪಗೊಂಡು ತನ್ನ ಕೇಸರವನ್ನು ಕೊಡವಿಕೊಂಡು–ಕಾಡಿನಲ್ಲಿ ಬೆಂಕಿಯಂತೆ–ರಾಕ್ಷಸರ ಸೈನ್ಯದಲ್ಲೆಲ್ಲ ಸಂಚರಿಸುತ್ತಿತ್ತು. ದೇವಿಯು ಯುದ್ಧಮಾಡುತ್ತಾ ರಣಾಂಗಣದಲ್ಲಿ ಬಿಡುತ್ತಿದ್ದ ನಿಟ್ಟುಸಿರುಗಳು ಕೂಡಲೆ ಸಹಸ್ರಾರು ಗಣದೇವತೆಗಳಾಗಿ ಹೊರತೋರಿಕೊಂಡರು. ಆ ದೇವಿಯರು ಪರಶು, ಭಿಂದಿಪಾಲ, ಕತ್ತಿ, ಪಟ್ಟಿಶ–ಮುಂತಾದ ಆಯುಧಗಳಿಂದ ರಾಕ್ಷಸರೊಡನೆ ಯುದ್ಧಮಾಡುತ್ತಿದ್ದರು. ಹಾಗೂ ದೇವಿಯ ಶಕ್ತಿಯಿಂದ ಮೈಗೂಡಿದವರಾಗಿ ಅಸುರರನ್ನು ನಾಶಗೊಳಿಸುತ್ತಾ ಪಟಹ, ಶಂಖ, ಮೃದಂಗ–ಮುಂತಾದ ವಾದ್ಯಗಳನ್ನು ಬಾರಿಸುತ್ತಾ ಆ ಯುದ್ಧಸಮಾರಂಭದಲ್ಲಿ ಭಾಗವಹಿಸಿದ್ದರು.

**ತತೋ ದೇವೀ ತ್ರಿಶೂಲೇನ ಗದಯಾ ಶಕ್ತಿವೃಷ್ಟಿಭಿಃ ।**
**ಖಡ್ಗಾದಿಭಿಶ್ಚ ಶತಶೋ ನಿಜಘಾನ ಮಹಾಸುರಾನ್ ॥೫೪॥**
**ಪಾತಯಾಮಾಸ ಚೈವಾನ್ಯಾನ್ ಘಂಟಾಸ್ವನವಿಮೋಹಿತಾನ್ ।**
**ಅಸುರಾನ್ ಭುವಿ ಪಾಶೇನ ಬದ್ಧ್ವಾ ಚಾನ್ಯಾನಕರ್ಷಯತ್ ॥೫೫॥**

೫೪-೫೫. ಅನಂತರ ದೇವಿಯು ತ್ರಿಶೂಲ, ಗದೆ, ಶಕ್ತಿ–ಮುಂತಾದ, ಹಾಗೂ ಕತ್ತಿಯೇ ಮೊದಲಾದ ಆಯುಧಗಳ ( ಹೊಡೆತಗಳ ) ಮಳೆಯಿಂದ ಮಹಾರಾಕ್ಷಸರುಗಳನ್ನು ಕೊಲ್ಲುತ್ತಿದ್ದಳು. ಘಂಟಾನಾದದಿಂದ ಮೂರ್ಛಿತರಾದ ಕೆಲವರನ್ನು ಕೆಡವಿದಳು. ಮತ್ತೆ ಕೆಲವರನ್ನು ಹಗ್ಗದಿಂದ ಕಟ್ಟಿ ನೆಲದಮೇಲೆ ಎಳೆದಾಡಿದಳು.

**ಕೇಚಿದ್ ದ್ವಿಧಾ ಕೃತಾಸ್ತೀಕ್ಷ್ಣೈಃ ಖಡ್ಗಪಾತೈಸ್ತಥಾಪರೇ ।**
**ವಿಪೋಥಿತಾ ನಿಪಾತೇನ ಗದಯಾ ಭುವಿ ಶೇರತೇ ॥ ೫೬ ॥**
**ವೇಮುಶ್ಚ ಕೇಚಿದ್ ರುಧಿರಂ ಮುಸಲೇನ ಭೃಶಂ ಹತಾಃ ।**
**ಕೇಚಿನ್ನಿಪತಿತಾ ಭೂಮೌ ಭಿನ್ನಾಃ ಶೂಲೇನ ವಕ್ಷಸಿ ॥ ೫೭ ॥**

**ನಿರಂತರಾಃ ಶರೌಘೇಣ ಕೃತಾಃ ಕೇಚಿದ್ರಣಾಜಿರೇ ।**
**ಶ್ಯೇನಾನುಕಾರಿಣಃ ಪ್ರಾಣಾನ್ ಮುಮುಚುಸ್ತ್ರಿದಶಾರ್ದನಾಃ ॥ ೫೮ ॥**

೫೬–೫೮. ಕೆಲವರು ಹರಿತವಾದ ಆಯುಧಗಳಿಂದ ಎರಡಾಗಿ ಸೀಳಲ್ಪಟ್ಟರು. ಮತ್ತೆ ಕೆಲವರು ಕತ್ತಿಯ ಏಟುಗಳಿಂದ ಬಿದ್ದುಹೋದರು. ಗದೆಯಿಂದ ಚಚ್ಚಲ್ಪಟ್ಟ ಕೆಲವರು ನೆಲದ ಮೇಲೆ ಮಲಗಿದರು. ಮುಸಲ (ಒನಕೆ) ಯಿಂದ ಬಹಳವಾಗಿ ಹೊಡೆಯಲ್ಪಟ್ಟ ಕೆಲವರು ರಕ್ತವನ್ನು ಕಾರಿದರು. ಮತ್ತೆ ಕೆಲವರು ಎದೆಯಲ್ಲಿ ಶೂಲದಿಂದ ತಿವಿಯಲ್ಪಟ್ಟವರಾಗಿ ನೆಲದ ಮೇಲೆ ಬಿದ್ದರು. ಕೆಲವರು ಯುದ್ಧದಲ್ಲಿ ಬಾಣಗಳ ಸುರಿಮಳೆಯಿಂದ ( ಉಸಿರಾಡಲೂ ಜಾಗವಿಲ್ಲದಂತೆ ) ಮಾಡಲ್ಪಟ್ಟರು. ಹೀಗೆ ದೇವಶತ್ರುಗಳಾದ ರಾಕ್ಷಸರು ಗಿಡಗಗಳು ಹಾರುವಂತೆ ತಮ್ಮ ಪ್ರಾಣಪಕ್ಷಿಗಳನ್ನು (ಶರೀರದಿಂದ ಮೇಲುಗಡೆಗೆ) ಹಾರಿಸಿಕೊಂಡು (ಮೃತರಾದರು).

**ಕೇಷಾಂಚಿದ್ಬಾಹವಶ್ಛಿನ್ನಾಶ್ಛಿನ್ನಗ್ರೀವಾಸ್ತಥಾಪರೇ ।**
**ಶಿರಾಂಸಿ ಪೇತುರನ್ಯೇಷಾಮನ್ಯೇ ಮಧ್ಯೇ ವಿದಾರಿತಾಃ ॥ ೫೯ ॥**
**ವಿಚ್ಛಿನ್ನಜಂಘಾಸ್ತ್ವಪರೇ ಪೇತುರುರ್ವ್ಯಾಂ ಮಹಾಸುರಾಃ ।**
**ಏಕಬಾಹ್ವಕ್ಷಿಚರಣಾಃ ಕೇಚಿದ್ದೇವ್ಯಾ ದ್ವಿಧಾ ಕೃತಾಃ ॥ ೬೦ ॥**

೫೯-೬೦. ಕೆಲವರ ತೋಳುಗಳು (ಆ ಯುದ್ಧದಲ್ಲಿ) ಕತ್ತರಿಸಲ್ಪಟ್ಟವು. ಕೆಲವರಿಗೆ ಕುತ್ತಿಗೆಯು ತುಂಡಾಯಿತು. ಮತ್ತೆ ಕೆಲವರ ತಲೆಗಳೇ ಬಿದ್ದುಹೋದವು. ಇನ್ನು ಕೆಲವರು ನಡುಭಾಗದಲ್ಲಿ ಸೀಳಲ್ಪಟ್ಟರು. ಕೆಲವು ಭಾರಿಯ ರಾಕ್ಷಸರು ತೊಡೆಗಳನ್ನು ಮುರಿದುಕೊಂಡು ಭೂಮಿಯಲ್ಲಿ ಬಿದ್ದರು. ಕೆಲವರು ಒಂಟಿತೋಳು, ಕಣ್ಣು, ಕಾಲುಗಳುಳ್ಳವರಾಗಿ ಮಾಡಲ್ಪಟ್ಟರು. ಕೆಲವರು ದೇವಿಯಿಂದ ಎರಡು ಹೋಳಾಗಿ ಮಾಡಲ್ಪಟ್ಟರು.

**ಛಿನ್ನೇಽಪಿ ಚಾನ್ಯೇ ಶಿರಸಿ ಪತಿತಾಃ ಪುನರುತ್ಥಿತಾಃ ।**
**ಕಬಂಧಾ ಯುಯುಧುರ್ದೇವ್ಯಾ ಗೃಹೀತಪರಮಾಯುಧಾಃ ॥೬೧॥**
**ನನೃತುಶ್ಚಾಪರೇ ತತ್ರ ಯುದ್ಧೇ ತೂರ್ಯಲಯಾಶ್ರಿತಾಃ ।**
**ಕಬಂಧಾಶ್ಛಿನ್ನಶಿರಸಃ ಖಡ್ಗಶಕ್ತ್ಯೃಷ್ಟಿಪಾಣಯಃ ॥ ೬೨ ॥**
**ತಿಷ್ಠ ತಿಷ್ಠೇತಿ ಭಾಷಂತೋ ದೇವೀಮನ್ಯೇ ಮಹಾಸುರಾಃ ॥**

೬೧–೬೨. ಬೇರೆಯ ಕೆಲವರು ತಲೆಯು ತುಂಡಾಗಿ ಹೋಗಿದ್ದರೂ ಬಿದ್ದವರು ಮೇಲೆದ್ದರು. (ಅವರ) ಮುಂಡಗಳು ಒಳ್ಳೆಯ ಆಯುಧಗಳನ್ನು ಹಿಡಿದು ದೇವಿಯೊಡನೆ ಯುದ್ಧಮಾಡಿದವು. ಮತ್ತೆ ಕೆಲವು ಆ ಯುದ್ಧದಲ್ಲಿ ವಾದ್ಯಗಳ ಧ್ವನಿಗೆ ಅನುಗುಣವಾಗಿ ಲಯಕ್ಕೆ ತಕ್ಕಂತೆ ಕುಣಿದಾಡಿದವು. ಮತ್ತೆ

brothers and other relatives - all these I do not wish to kill, though they kill me, O Madhusudana, even for the sake of dominion over the three worlds ; how much less for the sake of this earth.

VERSES : 35-37

' Killing these sons of Dhritaraashtra, what pleasure can be ours, O Janaardhana ? Sin alone will be our gain by killing these felons. Therefore, we should not kill the sons of Dhritaraashtra, our relatives ; for, how can we be happy by killing our own people, O Madhava ?

VERSES : 38 - 40

'Though these, with their intelligence clouded by greed, see no evil in the destruction of the families in society, and no sin in their cruelty to friends why should not we, who clearly see evil in the destruction of the family-units, learn to turn away from this sin, O Janaardana ? In the destruction of a family the religious rites which have come down from time immemorial to that family perish ; on the destruction of spirituality, impiety overcomes the whole family.

VERSES : 41 - 44

' By the prevalence of impiety, O Krishna, the women of the family become corrupt and sinful ; and women becoming corrupted and sinful. O descendent of Vrishni Clan (Vaarshneya i.e. Krishna),

there arises intermingling or admixture of castes. (Such) admixture (confusion) of castes leads these slayers of the family and the family to hell, because their forefathers, deprived of the offerings of Pinda or rice-balls and Udaka or water, fall. By these evil deeds of the family, which cause confusion of castes, the eternal religious rites of the caste and the family are destroyed. We have heard, O Janaardana that for those men in whose families the religiors practice have been destroyed there is dwelling for an unkn-own period in hell.

VERSES : 45 - 46

'Alas! we are involved in a great sin, in that we are prepared to kill our kinsmen, (prompted) by greed for the pleasures of the kingdom. If the sons of Dhritaraashtra, with weapons in hand, slay me, who is unresisting and unarmed, in battle, that would be better for me.'

VERSE : 47.

Sanjaya stated : "Having thus spoken in the midst of the battle-field, Arjuna sat down on the seat of the chariot, casting away his bow and arrow, with a mind distressed with sorrow."

---

## CHAPTER - II

### VERSES 1 - 10

When Arjuna, unmindful of Sri Krishna's encouraging statements, pleaded that "can the killing of teachers or preceptors and elders in war be in keeping with Dharma or Religion ? My mind does not approve of my taking part in this war. Please teach me the real Truth", Bhagawaan (Sri Krishna) said :

### VERSES : 11 - 25

" Oh Arjuna ! Because you have not known the Ultimate Truth of the Self you have got these grief and attachment. Atman or the Self is ever existing and devoid of transformation; hence, as these Bheeshma and others have no destruction from the standpoint of the Self or Atman, there is no cause for grief. A Viveki or discriminative thinker has no cause to grieve about the pairs of opposites like cold and heat which create happiness or misery for Jeevas when they are alive only but which are transient and temporary Vedanas or feelings of the mind. An existing thing or entity cannot be destroyed, a non-existing thing cannot be born- how can one who knows this truth be grief-stricken ? Knowest thou that as the Self or Atman is of the essence of Reality, He has no destruction, and as the body etc. are unreal it is but

natural that they are destroyed. Looking at it from the standpoint of the Self or Atman, you have no agentship of killing, nor there is the action of Bheeshma and others being killed. For one who has known exactly what the essence of the Self or Atman is and is himself established as the Self,it is impossible for him to envisage that he is himself killing or is dying as a result of being killed (by somebody). If the clothes when worn out are removed or if new clothes are worn by us, there is no change whatsoever in our essence of being, indeed. Similarly, even if the body undergoes any change there is no possibility of any transformation in the Self or Atman. Hence, do not grieve about this Atman or the Self who cannot be subjected to change in any manner.

VERSES : 26 - 30

"Even if you entertain the common man's belief that Atman is born when the body is born and dies along with it, then also there is no reason for your grief. If it is the nature of Atman to be born and then die, then why should you grieve for that ? But the real fact is not like this. Atman or the Self is indestructible. Hence there is no ason whatsoever for your grief.

VERSES : 31 - 38

"Even looking at it from the viewpoint that to take part in war is your own religion (Swadharma), there is no reason for your grief. For, if you win

**ಅಧ್ಯಾತ್ಮಪ್ರಕಾಶಕಾರ್ಯಾಲಯ, ಬೆಂಗಳೂರುಶಾಖೆ,**
**ನಂ. 68, ೨ನೆಯ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು-560028**
( ಸಂಸ್ಥಾಪಕರು : ಪ. ಪ. ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು )

**1984ನೆಯ ಡಿಸೆಂಬರ್ ಮಾಹೆಯಲ್ಲಿ ನಡೆಯುವ**
**ವಿಶೇಷ ಉಪನ್ಯಾಸಗಳು ; ಸಂಜೆ 5 ರಿಂದ 6 ರ ವರೆಗೆ**

1-12-84ನೆಯ ಶನಿವಾರ
ವೇ॥ಬ್ರ॥ಶ್ರೀ॥ ಹೆಚ್. ಶ್ರೀಧರ B.Sc.,ರವರಿಂದ. **"ಆಳ್ವಾರರುಗಳ ಸಂದೇಶ"**

2-12-84ನೆಯ ಭಾನುವಾರ
ವೇ॥ಬ್ರ॥ಶ್ರೀ॥ ಎ. ಅನಂತನರಸಿಂಹಾಚಾರ್ M A., ರವರಿಂದ
**"ವೈದಿಕಸಂಸ್ಕಾರಗಳ ವೈಜ್ಞಾನಿಕಮೌಲ್ಯ"**

8-12-84ನೆಯ ಶನಿವಾರ
ಶ್ರೀ ಎಂ.ಡಿ. ರಾಮಾನುಜಯ್ಯಂಗಾರ್‌ರವರಿಂದ **"ಜ್ಯೋತಿಷ್ಯವು ಪ್ರತ್ಯಕ್ಷಶಾಸ್ತ್ರ"**

9-12-84ನೆಯ ಭಾನುವಾರ
ಶ್ರೀ ವಿದ್ವಾನ್ ಯು. ಮಾಧವಾಚಾರ್ಯ,M.A., **"ಶಕುಂತಲೋಪಾಖ್ಯಾನ"**

15-12-84ನೆಯ ಶನಿವಾರ
ಡಾ॥ ಎ. ರಾಮಸ್ವಾಮಿ ಅಯ್ಯಂಗಾರ್,M.A.Ph.d., **"ಸನಾತನಸಂಸ್ಕೃತಿ"**

16-12-84ನೆಯ ಭಾನುವಾರ
(ಶ್ರೀಶ್ರೀಗಳವರ 105 ನೆಯ ಜಯಂತಿ ಪ್ರಯುಕ್ತ ವಿಶೇಷಕಾರ್ಯಕ್ರಮಗಳು)
ವೇ॥ಬ್ರ॥ಶ್ರೀ॥ ಕೆ. ಜಿ. ಸುಬ್ರಾಯಶರ್ಮರವರಿಂದ
**"ವೇದಾಂತದರ್ಶನಕ್ಕೆ ಶ್ರೀಶ್ರೀಗಳವರ ಕೊಡುಗೆ"**

20-12-84ನೆಯ ಗುರುವಾರ
ಬ್ರಹ್ಮೀಭೂತ ಪ.ಪ. ಶ್ರೀಶ್ರೀ ಜ್ಞಾನಾನಂದೇಂದ್ರಸರಸ್ವತೀ ಮಹಾಸ್ವಾಮಿಗಳವರ
ದ್ವಿತೀಯವಾರ್ಷಿಕಾರಾಧನಪ್ರಯುಕ್ತ ವಿಶೇಷಕಾರ್ಯಕ್ರಮಗಳು

22-12-84ನೆಯ ಶನಿವಾರ
ಶ್ರೀ ಎಂ.ಕೆ. ಶ್ರೀಧರ, M.A., ರವರಿಂದ **"ಅತೀಂದ್ರಿಯಾನುಭವ"**

23-12-84ನೆಯ ಭಾನುವಾರ
ಪ್ರೊ. ಸಿ. ಅನಂತಾಚಾರ್‌ರವರಿಂದ **"ಪ್ರಮಾಣ"**

29-12-84ನೆಯ ಶನಿವಾರ
ಶ್ರೀ॥ ಆಳವಂದಾರ್ ಗೋಪಾಲಾಚಾರ್‌ರವರಿಂದ
**"ಕಥೆಕಾದಂಬರಿಗಳಲ್ಲೂ ಅಧ್ಯಾತ್ಮ"**

30-12-84ನೆಯ ಭಾನುವಾರ
ಪಂಡಿತ್ ಕೆ.ಜಿ. ಸುಬ್ರಾಯಶರ್ಮರವರಿಂದ **"ವೇದಾಂತದಲ್ಲಿ ತರ್ಕ"**

**ತಮಗೆಲ್ಲರಿಗೂ ಆದರದ ಸುಸ್ವಾಗತ.**

ಬೆಂಗಳೂರು-560028
ತಾ॥ 1-12-1984.

**ಕೆ. ಜಿ. ಸುಬ್ರಾಯಶರ್ಮ,**
ಕಾರ್ಯದರ್ಶಿ.

ADHYATMA *Prakasha* Regd. No. KRNI-5

Registered with the Registrar of News-papers for India under No. R. N. 13244/57

## ಕೇಳಿರಿ

ವಸ್ತುವಿಭಜನೆಯೇ ಭೌತಿಕವಿಜ್ಞಾನಶಾಸ್ತ್ರದ ಮುಖ್ಯ ಜೀವಾಳ. ಹಾಗೆಯೇ ಒಂದರೊಡನೊಂದನ್ನು ಬೆರೆಯಿಸಿ ಹೊಸಹೊಸ ಶೋಧಗಳಿಂದ ಜಗತ್ತಿಗೆ ಕಲ್ಯಾಣವನ್ನು ಮಾಡಬೇಕೆಂಬುದೇ ವಿಜ್ಞಾನಿಗಳ ಉದ್ದೇಶ. ಆದರೆ ಈ ಶಾಸ್ತ್ರದಲ್ಲಿ ಚೇತನವನ್ನು ಕಡೆಗಣಿಸಿರುವ ದೋಷವಿದೆ. ವೇದಾಂತವಿಜ್ಞಾನದಲ್ಲಾದರೊ, ಎಲ್ಲಾ ಸೃಷ್ಟಿಯನ್ನೂ ಚೇತನದಿಂದಲೇ ಆರಂಭಿಸಿ ವಿಭಜನೆ-ಸಂಯೋಗಗಳ ಕಾಲಕ್ಕೂ ಚೇತನವೇ ಆ ವಸ್ತುವಿನ ತಿರುಳೆಂದು ತಿಳಿಸಿ ಕಡೆಯಲ್ಲಿ ಚೇತನವೊಂದೇ ಸತ್ಯವೆಂಬ ನಿಜವನ್ನು ಸಾರಿರುತ್ತದೆ. ತ್ರಿವೃತ್ಕರಣವನ್ನು ಶ್ರುತಿಯಲ್ಲಿ ತಿಳಿಸಿರುವದರ ಉದ್ದೇಶವೇ ಇದು.

To.

Sri




M 414 Sri J. Sreenivasa
Murthy, No. 18, II Cross
Kodanda Rampuram
P.O. BANGALORE-3

Edited Printed & Published by H. S. Lakshminarasimha Murthy as Secretary for The Adhyatma Prakasha Karyalaya, At The Adhyatma Prakasha Press, Holenarsipur - 573211

6—12—1984